# ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ

(ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕ
ಎಸ್.ಪಿ. ತಿಪ್ಪನಾಯಕ

ಮಾರ್ಗದರ್ಶಕರು
ಡಾ. ಪಿ. ಮಹದೇವಯ್ಯ
ಪ್ರವಾಚಕರು



ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮-೦೯

# ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ

(ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕ
ಎಸ್.ಪಿ. ತಿಪ್ಪನಾಯಕ



ಮಾರ್ಗದರ್ಶಕರು
ಡಾ. ಪಿ. ಮಹದೇವಯ್ಯ
ಪ್ರವಾಚಕರು






ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೮-೦೯

## ಮಾರ್ಗದರ್ಶಕರ ದೃಢೀಕರಣ ಪತ್ರ

**"ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ"** ಎಂಬ ಸಂಪ್ರಬಂಧವು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಎಸ್.ಪಿ. ತಿಪ್ಪನಾಯಕ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಡಾ. ಪಿ. ಮಹದೇವಯ್ಯ)**
**ಪ್ರವಾಚಕರು**
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: ೧೪.೧೦.೦೯
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣ ಪತ್ರ

**"ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ"** ಎಂಬ ಸಂಪ್ರಬಂಧವನ್ನು ಡಾ. ಪಿ. ಮಹದೇವಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಎಸ್.ಪಿ. ತಿಪ್ಪನಾಯಕ)
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: ೧೪:೧೬:೦೮
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಪ್ರಸ್ತಾವನೆ

ಕನ್ನಡ ವ್ಯಾಕರಣ ಇತಿಹಾಸವು ಇಂದು ನಿನ್ನೆಯದಲ್ಲ. ಕನ್ನಡ ವ್ಯಾಕರಣಕ್ಕೆ ನಯಸೇನನಾಧಿಯಾಗಿ ನಂತರದ ಅತ್ಯಂತ ಪ್ರಮುಖ ವೈಯ್ಯಾಕರಣಿಗಳಾದ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರಲ್ಲದೆ ಇತರೆ ಟೀಕಾಕಾರರು ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನಗಳಲ್ಲಿ ಅನೇಕ ವ್ಯಾಕರಣ ಗ್ರಂಥಗಳನ್ನು ವಿದ್ವತ್ಪೂರ್ಣವಾಗಿ ರಚಿಸಿರುವುದನ್ನು ಕಾಣುತ್ತೇವೆ. ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಭಾಷಾವಿಜ್ಞಾನ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ.

ಭಾಷೆಯನ್ನು ಅಧ್ಯಯನ ಮಾಡುವ ಬಗೆ (ರೀತಿ) ಇಂದು ಅನೇಕ ಮುಖಗಳಲ್ಲಿ ಬೆಳೆಯುತ್ತಿದೆ. ಆದರೆ ವಿಶ್ವದಲ್ಲಿ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಆಗಿರುವ ಮತ್ತು ಆಗುತ್ತಿರುವ ಅನೇಕ ಬೆಳವಣಿಗೆಗಳು ಕನ್ನಡಕ್ಕೆ ಇನ್ನೂ ಅಪರಿಚಿತವಾಗಿಯೇ ಇವೆ ಎನ್ನುವುದು ಸತ್ಯ.

ಕನ್ನಡದ ವ್ಯಾಕರಣ ಬೋಧನೆ ಹಾಗೂ ಅಧ್ಯಯನಗಳು ಸಾವಿರಾರು ವರ್ಷಗಳಿಂದ ನಿರಂತರವಾಗಿ ನಡೆದುಕೊಂಡು ಬರುತ್ತಿವೆ.

ಇಂದಿಗೂ ಶಾಲೆಗಳಲ್ಲಿ ಮಕ್ಕಳು ವ್ಯಾಕರಣವನ್ನು ಕಲಿಯುತ್ತಿದ್ದಾರೆ. ವಿಶ್ವವಿದ್ಯಾಲಯ ಮಟ್ಟದಲ್ಲಿ ಸಾಕಷ್ಟು ಅಧ್ಯಯನ, ಸಂಶೋಧನೆಗಳು ನಡೆಯುತ್ತಿವೆ. ಆದಾಗ್ಯೂ ಸಾವಿರ ವರ್ಷದಷ್ಟು ಹಿಂದೆ ಬರೆದ ಶಬ್ದಮಣಿದರ್ಪಣ ಇಂದಿಗೂ ಮಾದರಿಯಾಗಿ ಉಳಿದಿದೆ. ವಿಶ್ವವಿದ್ಯಾಲಯ ಮಟ್ಟದಲ್ಲಿ ಕನ್ನಡ ವ್ಯಾಕರಣ ಬೋಧನೆಗೆ ಶಬ್ದಮಣಿದರ್ಪಣವನ್ನು ಇಂದಿಗೂ ಬಳಸಿಕೊಳ್ಳಲಾಗುತ್ತದೆ. ಅದನ್ನು ಸಂಪೂರ್ಣವಾಗಿ ಆಧಾರವಾಗಿಟ್ಟುಕೊಂಡು ಆಧುನಿಕ ಕಾಲದಲ್ಲಿ ಬರೆಯಲಾದ 'ಹೊಸಗನ್ನಡ ವ್ಯಾಕರಣ'ಗಳನ್ನು ಶಾಲಾಪಠ್ಯಗಳಲ್ಲಿ ಕಲಿಸಬೇಕಾಗುತ್ತಿದೆ. ಹೀಗಾಗಿ ವ್ಯಾಕರಣ ಒಂದು ಕಬ್ಬಿಣದ ಕಡಲೆಯಾಗಿ ಉಳಿದಿದೆ. ಮಕ್ಕಳು ವ್ಯಾಕರಣವನ್ನು ಸರಿಯಾಗಿ ಕಲಿಯುವುದಿರಲಿ, ಅರ್ಥವನ್ನೂ ಮಾಡಿಕೊಳ್ಳುತ್ತಿಲ್ಲ. ಹಾಗಾದರೆ ಇದಕ್ಕೆ ಕಾರಣವೇನು? ಎಲ್ಲಿ ಸಮಸ್ಯೆಗಳಿವೆ? ಇವೆ. ಮೊದಲಾದ ಪ್ರಶ್ನೆಗಳು ಏಳುತ್ತವೆ. ಇಂತಹ ಪ್ರಶ್ನೆಗಳು ಎದುರಾದಾಗ ಡಿ.ಎನ್.ಶಂಕರ್‌ಭಟ್ ಅವರ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಮಾತು

ಎದುರಾಗುತ್ತದೆ. ಇಂದು ಕನ್ನಡಕ್ಕೊಂದು ವ್ಯಾಕರಣ ರಚನೆ ಅಗತ್ಯ ಇದೆ. ನಮಗೀಗ ಬೇಕಾಗಿರುವ ವ್ಯಾಕರಣವಾದರೂ ಎಂತಹದ್ದು? ಇದು ತುಂಬ ಪ್ರಮುಖವಾದ ಪ್ರಶ್ನೆ. ಭಾಷಾವಿಜ್ಞಾನಿಗಳು ಹೇಳುವಂತೆ ವ್ಯಾಕರಣ ಸಹಜವಾಗಿರಬೇಕು ಮತ್ತು ಸರಳವಾಗಿರಬೇಕು. ಈ ಎರಡೂ ಅಂಶಗಳು ಪರಸ್ಪರ ಒಂದನ್ನೊಂದು ಅವಲಂಬಿಸಿದಂತವುಗಳೇ ಆಗಿವೆ. ಕೈಯ+ಅಡಿ ಎನ್ನುವ ರಚನೆಯೊಂದು ಅಂಗೈ ಎಂದಾಗುತ್ತದೆ. ಎಂದು ಹೇಳುವ ಅಸಹಜ ವ್ಯಾಕರಣಗಳು ನಮಗೀಗ ಬೇಕಿಲ್ಲ. ಅದೇ ರೀತಿ ಕನ್ನಡ ಸಂಧಿ, ಸಂಸ್ಕೃತ ಸಂಧಿ ಎಂದು ವಿವರಿಸಿ, ಭಾಷಾಂತರಿಸಿಕೊಡುವಂತ ಕ್ಲಿಷ್ಟ ವ್ಯಾಕರಣಗಳು ನಮಗೀಗ ಬೇಕಿಲ್ಲ. ನಮಗೀಗ ಬೇಕಾಗಿರುವುದು ಸಹಜವಾದ ಮತ್ತು ಸರಳವಾದ ವ್ಯಾಕರಣ. ವ್ಯಾಕರಣ ಸಹಜವಾಗಿದ್ದಾಗ ಮಾತ್ರ ಸರಳವಾಗಲು ಸಾಧ್ಯ ಎನ್ನುವ ಅಂಶವನ್ನು ಮನದಟ್ಟು ಮಾಡಿಕೊಳ್ಳಬೇಕಿದೆ.

ಇಂದು ಕನ್ನಡಕ್ಕೆ ಒಂದು ಸಮಗ್ರ ವ್ಯಾಕರಣ ರಚಿಸಬೇಕಾದ ಅವಶ್ಯಕತೆ ಇದೆ. ಇಂದಿನ ಕಂಪ್ಯೂಟರ್ ಜಗತ್ತಿನಲ್ಲಿ ಕಂಪ್ಯೂಟರ್‌ಗೆ ಕನ್ನಡದ ಅವಶ್ಯಕತೆ ಇದೆ. ಅದಿಲ್ಲದೆ ಭಾಷೆ ಸಾಯುವ ಅಪಾಯಕ್ಕೆ ಬಂದು ನಿಲ್ಲುವ ಭಯವಿದೆ. ಇಂದಿನ ಆಧುನಿಕ ಬೆಳವಣಿಗೆಗಳಿಗೆ ತಕ್ಕಂತೆ ಭಾಷೆಯನ್ನು ಬೆಳೆಸಲೇಬೇಕಿದೆ. ಕಂಪ್ಯೂಟರ್‌ಗಳಿಗೆ ಕನ್ನಡವನ್ನು ಕಲಿಸುವುದು ಮಾತ್ರವಲ್ಲದೆ, ಮೊಬೈಲಿಗೂ ಕನ್ನಡವನ್ನು ಕಲಿಸಬೇಕಾದ ಅವಶ್ಯಕತೆ ಇದೆ.

ಕನ್ನಡ ಭಾಷೆಯು ಸುದೀರ್ಘವಾದ ಇತಿಹಾಸವನ್ನು ಹೊಂದಿದ್ದು ವಿಶಾಲವಾದ ಭೂ ಪ್ರದೇಶದಲ್ಲಿ ಬಳಕೆಯಲ್ಲಿರುವುದರಿಂದ ಭಾಷೆಯಲ್ಲಿ ಸಾಕಷ್ಟು ವೈವಿಧ್ಯತೆ ಇರುವುದನ್ನು ನೋಡಬಹುದು. ಕನ್ನಡದಲ್ಲಿ ಅನೇಕ ಐತಿಹಾಸಿಕ, ಭೌಗೋಳಿಕ ಅಲ್ಲದೆ ಸಾಮಾಜಿಕ ಉಪಭಾಷೆಗಳನ್ನು ಇಂದು ಗುರುತಿಸಲಾಗಿದೆ. ಸಮಗ್ರ ವ್ಯಾಕರಣ ರಚನೆಯ ಸಂದರ್ಭದಲ್ಲಿ ಈ ಎಲ್ಲ ಉಪಭಾಷೆಗಳನ್ನು ಪರಿಗಣಿಸಬೇಕಾದ ಅವಶ್ಯಕತೆ ಇದೆ.

ಹೀಗೆ ಎಲ್ಲ ಉಪಭಾಷೆಗಳನ್ನು ಒಮ್ಮೆಲೆ ತೆಕ್ಕೆಗೆ ತೆಗೆದುಕೊಂಡು ಒಂದು ವ್ಯಾಕರಣ ರಚಿಸುವುದು ಒಂದು ಪ್ರಯತ್ನದಿಂದ ಅಥವಾ ಒಬ್ಬ ವ್ಯಕ್ತಿಯಿಂದ ಸಾಧ್ಯವಾಗದ ಮಾತು. ಇದಕ್ಕೆ ಅನೇಕ ಜನ ವಿದ್ವಾಂಸರು ಅನೇಕ ವರ್ಷಗಳ ಕಾಲ ಕೆಲಸ ಮಾಡಬೇಕಿದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಉಪಭಾಷೆಯನ್ನೂ ಪ್ರತ್ಯೇಕವಾಗಿ ಮತ್ತು ಆಳವಾಗಿ ಅಧ್ಯಯನ ಮಾಡಬೇಕು. ಅವುಗಳ ರಚನೆಯನ್ನು ಪ್ರತ್ಯೇಕವಾಗಿ ಹಿಡಿದಿಡಬೇಕು. ಅನಂತರ ಒಟ್ಟಾರೆಯಾಗಿ ಎಲ್ಲ ಉಪಭಾಷೆಗಳನ್ನು ಇಟ್ಟುಕೊಂಡು ಒಂದು ಸಮಗ್ರ ಅಧ್ಯಯನ ಮಾಡಬೇಕಾಗಿದೆ. ಭಾಷೆಯ ಪ್ರತಿಯೊಂದು ಅಂಶವನ್ನು ಪ್ರತ್ಯೇಕವಾಗಿಟ್ಟುಕೊಂಡು ಐತಿಹಾಸಿಕ ಮತ್ತು ತೌಲನಿಕವಾಗಿ ನೋಡಬೇಕಾದ ಜರೂರಿದೆ. ಅನಂತರ ಮಾತ್ರವೇ ಕನ್ನಡಕ್ಕೆ ಸಹಜವಾದ ಮತ್ತು ಸರಳವಾದ

ವ್ಯಾಕರಣ ಬರೆಯಲು ಸಾಕಷ್ಟು ಮಾಹಿತಿ ದೊರೆಯಬಹುದು. ಈ ಎಲ್ಲ ಕೆಲಸಗಳನ್ನು ಮಾಡುವುದಕ್ಕೆ ಅನೇಕ ಎಡರು ತೊಡರುಗಳಿವೆ. ಕನ್ನಡ ಭಾಷೆಯ ಸಮಗ್ರ ಸರ್ವೇಕ್ಷಣಾಕಾರ್ಯ ಇದುವರೆಗೆ ನಡೆದಿಲ್ಲ. ಹೀಗಾಗಿ ಕನ್ನಡ ಭಾಷೆಯ ಸಮಗ್ರ ಪರಿಚಯ ಇಲ್ಲವಾಗಿದೆ. ಈ ಕಾರಣಕ್ಕಾಗಿ ಇಂತಹ ಬೃಹತ್ ಸರ್ವೇಕ್ಷಣಾ ಕಾರ್ಯವೊಂದರ ಅವಶ್ಯಕತೆ ಇದೆ. ಅಂದಾಗಲೇ ಉಪಭಾಷಾ ಮತ್ತು ಪ್ರಭೇಧ ಭಾಷಾ ವರ್ಗೀಕರಣಕ್ಕೆ ಅನುವಾಗುತ್ತದೆ. ಉಪಭಾಷೆಗಳನ್ನು ಗುರುತಿಸಿದ ಬಳಿಕವೇ ಅವುಗಳ ವರ್ಣನಾತ್ಮಕ ತೌಲನಿಕ ಮತ್ತು ಐತಿಹಾಸಿಕ ಅಧ್ಯಯನ ಸಾಧ್ಯ. ಅಂದಾಗ ಮಾತ್ರ ನಮಗಿಂದು ಬೇಕಾಗಿರುವ ಕನ್ನಡದ ಸಮಗ್ರ ವ್ಯಾಕರಣವೊಂದರ ರಚನೆಗೆ ಮುನ್ನಡೆಯಬಹುದು.

ಪ್ರಸ್ತುತ ಹೊಸ ಭಾರತೀಯ ಭಾಷಾ ಸರ್ವೇಕ್ಷಣಾ ಕಾರ್ಯ ಆರಂಭಗೊಳ್ಳುತ್ತಿದೆ. ಇದು ಈ ಮೇಲೆ ಚರ್ಚಿಸಿದ ಅನೇಕ ಕೊರತೆಗಳನ್ನು ಬಹುಮಟ್ಟಿಗೆ ನೀಗಿಸಬಲ್ಲದು. ಇದನ್ನು ಕನ್ನಡ ಭಾಷಾವಿಜ್ಞಾನ ಕ್ಷೇತ್ರವು ಅತ್ಯಂತ ಸಮರ್ಥವಾಗಿ ಬಳಸಿಕೊಳ್ಳಬೇಕಿದೆ. ಈ ಬಗೆಯ ಸಮಗ್ರ ಅಧ್ಯಯನವು ಬರಿಯ ಸಮಗ್ರ ಕನ್ನಡ ವ್ಯಾಕರಣ ರಚನೆಗೆ ಅನುವಾಗುವುದು ಮಾತ್ರವಲ್ಲದೆ ಅನೇಕ ಅಂಶಗಳಲ್ಲಿ ಮಹತ್ವವನ್ನು ಪಡೆದುಕೊಳ್ಳುತ್ತದೆ. ಕನ್ನಡ ಭಾಷೆಯ ಸಮಗ್ರ ಪರಿಚಯವನ್ನು ಇದರಿಂದ ತಿಳಿದುಕೊಳ್ಳಬಹುದು. ಭಾಷೆಯ ವೈವಿಧ್ಯತೆ, ಶ್ರೀಮಂತಿಕೆ ಇವುಗಳ ಪರಿಚಯವೂ ಕೂಡ ಆಗುತ್ತದೆ. ಭಾಷೆಯ ಇತಿಹಾಸ, ಬೆಳವಣಿಗೆ ಇವುಗಳನ್ನು ತಿಳಿದುಕೊಳ್ಳಬಹುದು. ಮುಖ್ಯವಾಗಿ ದ್ರಾವಿಡ ಭಾಷಾ ಮನೆತನದ ಭಾಷೆಗಳನ್ನು ಅಧ್ಯಯನ ಮಾಡಲು ಪೂರಕವಾಗುತ್ತದೆ. ಭಾಷಾ ಮನೆತನದಲ್ಲಿ ಕನ್ನಡದ ಸ್ಥಾನಮಾನ, ಭಾಷಾ ಮನೆತನದ ಇತರ ಭಾಷೆಗಳೊಂದಿಗೆ ಕನ್ನಡದ ಸಂಬಂಧ ಈ ಅಧ್ಯಯನಗಳಿಗೆ ಪೂರಕವಾಗುತ್ತದೆ. ಮೂಲ ದ್ರಾವಿಡ ಪುನರ್ರಚನೆಯ ಪ್ರಕ್ರಿಯೆಯಲ್ಲಿಯೂ ಇದು ಮಹತ್ವದ ಪಾತ್ರವಹಿಸುತ್ತದೆ.

ಈ ಮೇಲೆ ಚರ್ಚಿಸಿದಂತೆ ಭಾಷೆಯ ಸಮಗ್ರವಾದ ಮತ್ತು ವ್ಯಾಪಕವಾದ ಅಧ್ಯಯನದಿಂದ ಮಾತ್ರ ಭಾಷೆಯ ಸಮರ್ಥ ಸ್ವರೂಪವನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಆಗ ಅವುಗಳಿಗೆ ಸೂತ್ರಗಳನ್ನು ರಚಿಸುವುದು ಸರಳವಾಗುತ್ತದೆ. ಇದೇ ಸಂದರ್ಭದಲ್ಲಿ ಕನ್ನಡ ವ್ಯಾಕರಣ ಸರಳವೂ ಆಗಿರಬೇಕಾದ ಅವಶ್ಯಕತೆ ಇದೆ. ಹೊಸ ತಲೆಮಾರಿಗೆ ಕನ್ನಡವನ್ನು ಕಲಿಸಬೇಕಾದ ಅನಿವಾರ್ಯತೆ ಎಂದಿಗಿಂತ ಇಂದು ಹೆಚ್ಚಿದೆ. ಇಂದು ಮಕ್ಕಳಿಗೆ ವ್ಯಾಕರಣ ಒಂದು ಅಲರ್ಜಿಯಂತಾಗಿದೆ. ಕಾರಣ ಕಲಿಯುವ ವ್ಯಾಕರಣದ ಸೂತ್ರಗಳು ಆಡುವ ಮಾತಿಗೆ ಅನ್ವಯಿಸುವಂತಿರಬೇಕು. ಆದರೆ ವ್ಯಾಕರಣ ಕಲಿಯುವ ವಿದ್ಯಾರ್ಥಿ ಸೂತ್ರವೊಂದನ್ನು ಹೇಳುತ್ತಿದ್ದಂತೆ ತನ್ನ ದಿನನಿತ್ಯದ ಸೂತ್ರಗಳನ್ನು ಹೇಳಿ ಉದಾಹರಣೆಗಳನ್ನು ನೀಡಿದಾಗಲೂ ವಿದ್ಯಾರ್ಥಿಗಳಿಗೆ

ಅರ್ಥವಾಗದ ಪರಿಸ್ಥಿತಿ ಇದೆ. ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಅಂಕ ಪಡೆದುಕೊಳ್ಳ ಬೇಕಾಗಿರುವುದರಿಂದ ಸೂತ್ರಗಳನ್ನು, ಉದಾಹರಣೆಗಳನ್ನೂ ಕಂಠಪಾಠ ಮಾಡುತ್ತಿದ್ದಾರೆ. ಈ ತೆರನಾದ ಕನ್ನಡ ವ್ಯಾಕರಣ ಕಲಿಕೆಯು ಎಷ್ಟರಮಟ್ಟಿಗೆ ಫಲಪ್ರಧವಾಗಬಲ್ಲದು ಎಂಬುದು ಇಲ್ಲಿಯ ಸಮಸ್ಯೆಯಾಗಿದೆ. ಹಾಗೆ ಕನ್ನಡ ಸಂಧಿಗಳ ಸಮಸ್ಯೆಯ ಸ್ವರೂಪಗಳು ಸಹ ಈ ಸಮಸ್ಯೆಗಳಿಗೆ ಹೊರತಾಗಿಲ್ಲ. ಇಂದು ಪ್ರಾಥಮಿಕ, ಪ್ರೌಢ ಶಿಕ್ಷಣದಲ್ಲಿ ಕನ್ನಡ ಸಂಧಿ ಕಲಿಕೆಯೂ ಸಹ ಬಹಳ ತೊಡಕಿನ ವಿಷಯವಾಗಿದೆ. ಇಂತಹ ಸಮಸ್ಯೆಗಳ ಸ್ವರೂಪ ಹಾಗೂ ಅವುಗಳ ಕುರಿತ ಚರ್ಚೆಯನ್ನು ಡಿ.ಎನ್.ಶಂಕರಭಟ್‌ರವರ ನಿಲುವುಗಳನ್ನಾಧರಿಸಿ 'ಕನ್ನಡ ಸಂಧಿ ಸಮಸ್ಯೆಯ ಸ್ವರೂಪ' ಎಂಬ ಶೀರ್ಷಿಕೆಯ ನಿಬಂಧವನ್ನು ರೂಪಿಸಲಾಗಿದೆ.

# ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

## ಉದ್ದೇಶ

ಕನ್ನಡ ವ್ಯಾಕರಣ ಬೋಧನೆ ನಮ್ಮ ಶಾಲೆಯ ಪಠ್ಯಪುಸ್ತಕಗಳಲ್ಲಿ ಬಹಳ ತೊಡಕಿನ ವಿಷಯವಾಗಿದೆ. ಕಂಠಪಾಠ ಮಾದರಿಯಲ್ಲೇ ಬೋಧನೆ ಆಗುತ್ತಿದೆ. ಕೇವಲ ಪರೀಕ್ಷೆಯ ಉದ್ದೇಶಕ್ಕೆ ಮಾತ್ರ ಸೀಮಿತವಾಗಿದೆ. ಪರೀಕ್ಷೆ ಮುಗಿದ ನಂತರ ನಮ್ಮ ನೆನಪಿನಿಂದ ಹಾರಿಹೋಗುತ್ತಿವೆ. ಇದಕ್ಕೆ ಕಾರಣಗಳೇನು? ಕನ್ನಡದಲ್ಲಿ ಸಂಧಿ ಕಾರ್ಯಗಳನ್ನು ಅಧ್ಯಯನಕ್ಕೆ ಅನುಕೂಲವಾಗುವ ರೀತಿಯಲ್ಲಿ ಕನ್ನಡ ಸಂಧಿಗಳು ಮತ್ತು ಸಂಸ್ಕೃತ ಸಂಧಿಗಳೆಂದು ವರ್ಗೀಕರಿಸಲಾಗಿದೆ. ಈ ಎರಡು ಭಾಷೆಯ ಸಂಧಿ ಕಾರ್ಯಗಳು ಪರಸ್ಪರ ಭಿನ್ನ ಎಂಬುದಾಗಿ ಹೇಳುತ್ತಾ ಬರಲಾಗಿದೆ. ಅವು ಹೇಗೆ ಭಿನ್ನ ಎಂದು ತೋರಿಸುವ ಕೆಲಸ ಆಗಿಲ್ಲ. ಇತ್ತೀಚೆಗೆ ಡಾ. ಡಿ.ಎನ್.ಶಂಕರ ಭಟ್ ಅವರು 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಕೃತಿಯಲ್ಲಿ ಮಾಡಿತೋರಿಸಿದ್ದಾರೆ.

ಕನ್ನಡದಲ್ಲಿ ಸಂಧಿ ಕಾರ್ಯಗಳನ್ನು ವಿವರಿಸುವಾಗ ಸಂಸ್ಕೃತ ಭಾಷೆಗೆ ನೀಡಿರುವ ಮಾನ್ಯತೆಯನ್ನು ಹಿಂದಿ, ಮರಾಠಿ, ಇಂಗ್ಲೀಶ್, ಪರ್ಶಿಯನ್, ಅರಾಬಿಕ್ ಮುಂತಾದ ಭಾಷೆಗಳಿಗೆ ನೀಡಿಲ್ಲ. ಈ ಎಲ್ಲ ಭಾಷೆಗಳಿಂದ ಬಂದಿರುವ ಪದಗಳನ್ನು ಅಶುದ್ಧ ನೆಲೆಯಲ್ಲಿ ನಿಂತು ನೋಡಲಾಗುತ್ತಿದೆ. ಕನ್ನಡಕ್ಕೆ ಸಮಕಾಲೀನ ವ್ಯಾಕರಣ ರಚನೆ ಮಾಡಬೇಕಾದರೆ ಮೊದಲು ಸಂಸ್ಕೃತ ಭಾಷೆಯ ಪದಗಳು ನಮ್ಮಲ್ಲಿ ಬಳಕೆ ಮತ್ತು ಬರಹ ಎರಡು ನೆಲೆಗಳಲ್ಲಿವೆ. ಅಂತಹವುಗಳನ್ನು ಒಂದು ಕಡೆ ಸಂಗ್ರಹಿಸಬೇಕಾಗಿದೆ. ನಂತರ ವರ್ಗೀಕರಿಸಿ ಸಂಸ್ಕೃತ ಪದಗಳ ನಡುವೆ ಇರುವ ಸಂಧಿಕಾರ್ಯಕ್ಕಿಂತ, ಕನ್ನಡ ಸಂಧಿಕಾರ್ಯ ಹೇಗೆ ಭಿನ್ನವಾಗಿದೆ ಎಂಬುದನ್ನು ನಿರ್ಧರಿಸಬೇಕಾಗಿದೆ.

ಇಂದು ನಮ್ಮ ಪ್ರೌಢಶಾಲೆಯ ವ್ಯಾಕರಣಗಳಲ್ಲಿ ಸಂಸ್ಕೃತ ಸಂಧಿಗಳನ್ನು ಪರಿಚಯಿಸುವಾಗ ಶ್ಚುತ್ವ, ಷ್ಟುತ್ವ, ಜಸ್ತ್ವ, ಛತ್ತ್ವ ಮತ್ತು ಯಣ್ ಎಂದು ಸಂಸ್ಕೃತ ಭಾಷೆಯಲ್ಲಿದುವರಿಗೆ ಅದರ

ಪರಿಭಾಷೆಗಳನ್ನು ಬಳಸಿ ವಿವರಿಸಿಕೊಡಲಾಗುತ್ತಿದೆ. ಇದರಿಂದ ಶೈಕ್ಷಣಿಕವಾಗಿ ಯಾವ ಪ್ರಯೋಜನವಾಗುತ್ತಿಲ್ಲ. ಇದರ ಬದಲು ಸಂಧಿಕಾರ್ಯದಲ್ಲಿ ಜರುಗಿರುವ ಧ್ವನಿಗಳ ಬದಲಾವಣೆ ಮತ್ತು ಅದರ ನಿಯಮಗಳನ್ನು ಬೋಧನೆ ಮಾಡಬೇಕಾಗಿದೆ.

ಕನ್ನಡ ಸಂಧಿಗಳನ್ನು ಅವುಗಳ ಕಾರ್ಯದ ಆಧಾರದ ಮೇಲೆ ಲೋಪ, ಆಗಮ ಮತ್ತು ಆದೇಶ ಎಂದು ವರ್ಗೀಕರಿಸಿದ್ದಾರೆ. ಕನ್ನಡ ಪದಕ್ಕೆ ಕನ್ನಡ ಪದ ಸೇರಿ ಆಗುವ ಸಂಧಿಗಳು ಕನ್ನಡ ಸಂಧಿಗಳು. ಇದರಂತೆ ಸಂಸ್ಕೃತ ಪದಗಳಿಗೆ ಸಂಸ್ಕೃತ ಪದಗಳು ಸೇರಿ ಆಗುವ ಸಂಧಿಗಳು ಸಂಸ್ಕೃತ ಸಂಧಿಗಳೆಂದು ವರ್ಗೀಕರಿಸಲಾಗಿದೆ. ಉತ್ತರ ಪದ ಸ್ವರದಿಂದ ಮೊದಲಾದರೆ ಲೋಪ ಇಲ್ಲವೆ ಆಗಮ ಸಂಧಿಗಳು ಎಂದು ವ್ಯಂಜನ ಇದ್ದರೆ ಸಾಮಾನ್ಯವಾಗಿ ಆದೇಶ ಸಂಧಿ ಎಂದು ಕರೆಯಲಾಗಿದೆ. ಆದ್ದರಿಂದ ಸಂಸ್ಕೃತ ಭಾಷೆಯಲ್ಲಿ ಆದೇಶ ಸಂಧಿಗಳು ಜಾಸ್ತಿ. ಕನ್ನಡದಲ್ಲಿ ಲೋಪ ಮತ್ತು ಆಗಮಗಳು ಜಾಸ್ತಿ. ಆದೇಶ ಸಂಧಿಯಲ್ಲಿ ವ್ಯಂಜನಗಳು ಹೆಚ್ಚು ಕಾರ್ಯ ಪ್ರವೃತ್ತವಾಗುತ್ತವೆ. ಕನ್ನಡದಲ್ಲೂ ಇದನ್ನು ನೋಡಬಹುದು.

ಇತ್ತೀಚಿನ ದಿನಗಳಲ್ಲಿ ಬಳಕೆಯ ನೆಲೆಯಲ್ಲಿ ಪೂರ್ವ ಪದದ ಕೊನೆಯ ಧ್ವನಿಯು ಯಾವುದು ಎನ್ನುವುದರ ಮೇಲೆ ಸಂಧಿಕಾರ್ಯಗಳನ್ನು ವಿವರಿಸಬೇಕಾಗಿದೆ. ಏಕೆಂದರೆ ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಸಂಧಿ ಮಾಡುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಇಂತಹ ಸಂದರ್ಭದಲ್ಲಿ ಯಾವ ಭಾಷೆಯ ಸಂಧಿ ನಿಯಮವನ್ನು ಅನುಸರಿಸಬೇಕು ಎಂಬ ಪ್ರಶ್ನೆ ಎದುರಾಗುತ್ತದೆ. ಉದಾಹರಣೆಗೆ: ಊಟೋಪಾಚಾರ, ಗ್ಯಾಟೋತ್ತರ ಕತ್ತಲೋಪಚಾರ, ವ್ಯವಸಾಯೋಪಚಾರ, ಮಳೆಗಾಲೋತ್ಸವ, ಚುನಾವಣೋತ್ತರ, ಕನ್ನಡೋತ್ಸವ, ಹಸುರೋತ್ಸವ ಮುಂತಾದ ರಚನೆಗಳನ್ನು ಗಮನಿಸಿದಾಗ ಇಲ್ಲಿ ಪೂರ್ವ ಪದವಾದ 'ಊಟ' ಕನ್ನಡ ಪದ. ಉತ್ತರ ಪದವಾದ ಉಪಚಾರ ಸಂಸ್ಕೃತ ಪದ. ಊಟೋಪಚಾರ ಪದದಲ್ಲಿ ಸಂಸ್ಕೃತದ ಗುಣ ಸಂಧಿಯ ನಿಯಮವನ್ನು ಪಾಲಿಸಲಾಗಿದೆ. 'ಅ' ಕಾರಕ್ಕೆ 'ಉ' ಕಾರ ಪರವಾದಾಗ 'ಓ' ಕಾರ ಬರುವುದು ಈ ಸಂಧಿಯ ಒಂದು ಸಾಧ್ಯತೆ. ಅದೇ ನಿಯಮ ಇಲ್ಲೂ ಜರುಗಿದೆ. ಇಂತಹ ಸಂದರ್ಭದಲ್ಲಿ ಶೈಕ್ಷಣಿಕ ನೆಲೆಯಲ್ಲಿ ಸಂಸ್ಕೃತದ ಸಂಧಿ ನಿಯಮಗಳನ್ನು ಅನುಸರಿಸಬೇಕೋ, ಅಥವಾ ಕನ್ನಡ ಸಂಧಿ ನಿಯಮ ಅನುಸರಿಬೇಕೊ ಎನ್ನುವ ನಮ್ಮ ಮುಂದಿರುವ ಪ್ರಶ್ನೆ. ಈ ಮಾದರಿ ಪದ ರಚನೆಗಳು ಮಾಧ್ಯಮಗಳಲ್ಲಿ ಹೆಚ್ಚು ಬಳಕೆಯಾಗುತ್ತಿವೆ. ಆದ್ದರಿಂದ ಗುಣಸಂಧಿ ಎಂದು ಹೇಳುವುದಕ್ಕಿಂತ ರಾಜೋಪಚಾರ ಮಾದರಿಯಲ್ಲಿ ಊಟೋಪಚಾರ ಪದರಚನೆ ಆಗಿದೆ ಎಂದು ವಿವರಿಸುವುದು ಸೂಕ್ತ ಎಂದು ಭಾವಿಸಬೇಕಾಗಿದೆ.

ಇನ್ನೊಂದು ವಿಧಾನದಲ್ಲಿ ಸಂಧಿಗಳನ್ನು ವಿವರಿಸಲು ಸಾಧ್ಯ. ಮೊದಲೇ ಚರ್ಚೆ ಮಾಡಿದಾಗೆ ಸಂಸ್ಕೃತದ ಸಂಧಿ ಹೆಸರನ್ನು ನೇರವಾಗಿ ಬಳಕೆ ಮಾಡದೆ ಆ ಸಂಧಿಯಾಗುವ ಧ್ವನಿಗಳ ಬದಲಾವಣೆ ಹೇಗೆ ಆಗಿದೆ ಎಂದು ವಿವರಿಸಿದರೆ ಸಾಕು ಎಂದು ಡಾ. ಡಿ.ಎನ್.ಶಂಕರ ಭಟ್ ಅವರು ಅಭಿಪ್ರಾಯಪಡುತ್ತಾರೆ. ಉದಾಹರಣೆಗೆ ವಿದ್ಯುತ್ತು ಎಂಬ ಪದಕ್ಕೆ 'ಶಕ್ತಿ' ಪದ ಸೇರಿ 'ವಿದ್ಯುಚ್ಛಕ್ತಿ' ಎಂಬ ಸಮಸ್ತ ಪದ ನಮಗೆ ಲಭ್ಯವಿದೆ. ಇಲ್ಲಿ ವಿದ್ಯುತ್ ಎಂಬ ಪದದಲ್ಲಿ ಕೊನೆಯ ಎರಡು ಧ್ವನಿಗಳಾದ 'ತ್' ಮತ್ತು 'ಉ' ಲೋಪವಾಗಿ 'ಚ'ಕಾರವಾಗುತ್ತದೆ. ವಿದ್ಯುತ್ ಮಾತ್ರ ಉಳಿದಿದೆ. ವಿದ್ಯುತ್ ಪದದ ಕೊನೆಯ 'ತ' ಕಾರ 'ಚ' ಕಾರವಾಗುತ್ತದೆ. ವಿದ್ಯುತ್ ಪದಕ್ಕೆ 'ಶಕ್ತಿ' ಪದದ 'ಶ್' ಧ್ವನಿಗೆ 'ಛ' ಬಂದು 'ವಿದ್ಯುಚ್ಛಕ್ತಿ' ಎಂಬ ಸಮಸ್ತ ಪದ ಸಿದ್ಧಿಸಿದೆ. ಇದನ್ನು ಹೀಗೆ ಹೇಳುವ ಬದಲು ಶ್ಚುತ್ವ ಮತ್ತು ಛತ್ವ ಎಂದು ಹೇಳುವುದರಿಂದ ಯಾವ ಪ್ರಯೋಜನವಿಲ್ಲ. ಕನ್ನಡದಲ್ಲಿ ಸಂಧಿ ಸಂದರ್ಭದಲ್ಲಿ 'ಲೋಪ' ಸಂಧಿಯು ನಡೆದಿದೆ. ಹಾಗಾಗಿ ಕನ್ನಡದ ಲೋಪ, ಆಗಮ ಮತ್ತು ಆದೇಶ ಸಂಧಿಯಲ್ಲಿ ಸಂಸ್ಕೃತದ ಎಲ್ಲ ಸಂಧಿಕಾರ್ಯಗಳಲ್ಲಿ ವಿವರಿಸಲು ಸಾಧ್ಯವಿದೆ. ಅದರಲ್ಲೆ ಇ, ಈ, ಉ, ಊ, ಒ, ಓ ಮತ್ತು ಅ, ಆ ಎಂಬ ಸ್ವರಗಳೇ ಸಾಕು. ಅದರಲ್ಲೂ ಕನ್ನಡದ ಸಂಧಿ ಕಾರ್ಯ ವಿವರಿಸಲು ಅ, ಇ, ಎ, ಉ, ಒ ಸ್ವರಗಳೇ ಸಾಕು. ಉಳಿದ ಸ್ವರಗಳ ಅಗತ್ಯವಿಲ್ಲ ಎನ್ನಲಾಗಿದೆ.

ಕನ್ನಡ ಮತ್ತು ಸಂಸ್ಕೃತ ಸಂಧಿಕಾರ್ಯಗಳಿರುವ ವ್ಯತ್ಯಾಸವನ್ನು ಕೆಳಗಿನಂತೆ ಗುರುತಿಸಬಹುದು.

ಅ. ಸಂಸ್ಕೃತದಲ್ಲಿ ಎರಡು ಸಜಾತಿಯ ಸ್ವರ ಸೇರುವಾಗ ಒಂದು ಸ್ವರ ದೀರ್ಘವಾಗಿ ಆದೇಶವಾಗಿ ಬರುತ್ತದೆ. ಆದರೆ ಕನ್ನಡದಲ್ಲಿ ಇಂತಹ ಸಂದರ್ಭದಲ್ಲಿ ಎರಡು ಸ್ವರದಲ್ಲಿ ಒಂದು ಲೋಪವಾಗುತ್ತದೆ

**ಉದಾ:**

| **ಸಂಸ್ಕೃತ** | **ಕನ್ನಡ** |
|---|---|
| ದೇಶ + ಅಭಿಮಾನ = ದೇಶಾಭಿಮಾನ | ಚಿಕ್ಕ + ಅಣ್ಣ = ಚಿಕ್ಕಣ್ಣ |
| ಪ್ರೇಮ + ಅಮೃತ = ಪ್ರೇಮಾಮೃತ | ಅಲ್ಲಿ + ಇಲ್ಲ = ಅಲ್ಲಿಲ್ಲ. |
| | ಕಲ್ಲು + ಉಪ್ಪು = ಕಲ್ಲುಪ್ಪು |

ಆ. ಸಂಸ್ಕೃತ ಪದದಲ್ಲಿ ಮೊದಲನೆಯ ಪದದಲ್ಲಿ ಅಥವಾ ಇರುವ ಪದಗಳಲ್ಲೆ ಮೊದಲೆ ದೀರ್ಘವಾಗಿದ್ದರೆ, ಸಂಸ್ಕೃತದಲ್ಲಿ ಹಾಗೆ ಉಳಿಯುತ್ತದೆ ಮತ್ತು ಅದರೊಂದಿಗೆ ಬಂದಿರುವ ಮತ್ತೊಂದು ಸ್ವರ ಲೋಪವಾಗುತ್ತದೆ. ಇಂತಹ ಸಂದರ್ಭದಲ್ಲಿ ಆದೇಶ ಸಂಧಿ ಜರುಗಿದರೆ, ಕನ್ನಡದಲ್ಲಿ ಲೋಪಸಂಧಿ ಜರುಗಿದೆ.

ಉದಾ:

ವಿದ್ಯಾ + ಅರ್ಜನೆ = ವಿದ್ಯಾರ್ಜನೆ

ವಿದ್ಯಾ + ಅಭ್ಯಾಸ = ವಿದ್ಯಾಭ್ಯಾಸ

'ವಿದ್ಯಾ' ಪದದಲ್ಲಿ ಕೊನೆಯ ಸ್ವರ 'ಆ' ಮೊದಲೇ ಇದೆ. ಸಂಧಿಕಾರ್ಯ ನಡೆದ ಮೇಲೆ ದೀರ್ಘಸ್ವರ ಹಾಗೆ ಉಳಿದುಕೊಂಡಿದೆ. ಹುಡುಗ + ಆಟ = ಹುಡುಗಾಟ ಎಂಬ ಸಂದರ್ಭದಲ್ಲಿ ಲೋಪವಾಗಿದೆ.

ಇ. ಹೊಸಗನ್ನಡದಲ್ಲಿ ವ್ಯಂಜನ ಸಂಧಿ ಕಂಡುಬರುವುದಿಲ್ಲ. ಪದಮಧ್ಯ ಸಂಧಿ ಮಾತ್ರ ಬಳಕೆಯಲ್ಲಿದೆ. ಹಳೆಗನ್ನಡದಲ್ಲಿ ವ್ಯಂಜನಾಂತ ಪದಗಳು ಕಂಡುಬರುವುದರಿಂದ ವ್ಯಂಜನಾಂತ ಪದಗಳಿವೆ. ಹಿರಿದು(ಹಿರ್) + ಬಾಗಿಲು = ಹೆಬ್ಬಾಗಿಲು, ಕರಿ(ಕರ್) + ಕಲ್ಲು = ಕಗ್ಗಲ್ಲು, ಬೆನ್(ಬೆನ್ನು) + ಕಾವಲು = ಬೆಂಗಾವಲು ಇತ್ಯಾದಿ. ಆದರೆ ಸಂಸ್ಕೃತದಲ್ಲಿ ವ್ಯಂಜನಾಂತ ಪದಗಳು ಸಾಕಷ್ಟು ಬಳಕೆಯಲ್ಲಿವೆ.

ಈ. ಸಂಸ್ಕೃತ ಪದಗಳಲ್ಲಿ ಸಂಧಿಯಾಗುವಾಗ ಮೊದಲನೆಯ ಪದದ ಕೊನೆಯ ಅಕ್ಷರ ಬದಲಾದರೆ, ಕನ್ನಡ ಪದದಲ್ಲಿ ಎರಡನೆಯ ಪದದ ಮೊದಲನೆಯ ಅಕ್ಷರ ಬದಲಾವಣೆ ಆಗುತ್ತದೆ.

| ಸಂಸ್ಕೃತ ಪದ | ಕನ್ನಡ ಪದ |
|---|---|
| ವಾಕ್ + ಈಶ = ವಾಗೀಶ | ಮನೆ + ಕೆಲಸ = ಮನೆಗೆಲಸ |

ಉ. ಕನ್ನಡದಲ್ಲಿ 'ಕ' ಕಾರಕ್ಕೆ 'ಗ' ಕಾರ ಆದೇಶ. 'ತ' ಕಾರಕ್ಕೆ 'ದ'ಕಾರ ಆದೇಶ ಎಂದು ಇಲ್ಲಿಯವರೆಗೆ ವಿವರಿಸಲಾಗಿದೆ. ಆದರೆ ಎಲ್ಲಾ ಸಂದರ್ಭಗಳಲ್ಲಿ ಈ ನಿಯಮವನ್ನು ಅನ್ವಯಿಸಲು ಸಾಧ್ಯವಿಲ್ಲ.

ಉದಾ: ಆನೆ + ಕಾಲು = ಆನೆಕಾಲು ಆಗುತ್ತದೆಯೆ ಹೊರತು ಆನೆಗಾಲು ಆಗುವುದಿಲ್ಲ. ಅದೇ ರೀತಿ ತಲೆ + ತೆರಿಗೆ = ತಲೆತೆರಿಗೆ ಆಗುತ್ತದೆಯೇ ಹೊರತು ತಲೆದೆರಿಗೆ ಆಗುವುದಿಲ್ಲ. ಇಂತಹ ಸಣ್ಣಪುಟ್ಟ ಸಮಸ್ಯೆಗಳು ಕನ್ನಡ ಭಾಷೆಯಲ್ಲಿಯೇ ನಮಗೆ ದೊರೆಯುವುದರಿಂದ ಇನ್ನು ಅನೇಕ ಅನ್ಯ ಭಾಷಿಕ ಪದಗಳು ಸೇರಿಯಾಗುವ ಸಂಧಿ ನಿಯಮಗಳಲ್ಲಿ ಸಮಸ್ಯೆಗಳು ಅಸಂಖ್ಯಾತವಾಗಿವೆ.

ಯಾವುದೇ ಭಾಷೆಯ ಪದಗಳಿಗೆ ಮತ್ತಾವುದೇ ಭಾಷೆಯ ಪೂರ್ವೋತ್ತರ ಪದಗಳು ಸೇರಿ ಮಾಡುವ ಸಂಧಿಕಾರ್ಯಗಳಲ್ಲಿ ಕೂಡಾ ಅನೇಕ ಸಮಸ್ಯೆಗಳಿವೆ. ಅನುಸರಿಸುವ ಸಂಧಿ

ನಿಯಮ ಮಾತ್ರ ಬಹುತೇಕವಾಗಿ ಸಂಸ್ಕೃತದ ಸವರ್ಣದೀರ್ಘ ಹಾಗೂ ಗುಣಸಂಧಿ ನಿಯಮಗಳಾಗಿರುತ್ತವೆ. ಈ ಪ್ರಕಾರವಾದ ಅನೇಕ ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳನ್ನು ಕಲೆಹಾಕುವುದರ ಜೊತೆಗೆ ಅವುಗಳಲ್ಲಿ ಆಗಿರುವ ಅಕ್ಷರ ವ್ಯತ್ಯಾಸ ಮತ್ತು ಅನುಸರಿಸುವ ಸಂಧಿನಿಯಮಗಳಲ್ಲಿ ಆಗಿರುವ ಲೋಪದೋಷಗಳನ್ನು ಕುರಿತ ಚರ್ಚೆಯನ್ನು ಮಾಡಲಾಗಿದೆ.

ಒಟ್ಟಾರೆ ಈ ಅಧ್ಯಯನದ ಫಲಿತವೇನೆಂದರೆ 'ಕನ್ನಡಕ್ಕೆ ಕನ್ನಡದ್ದೇ ಆದ ವ್ಯಾಕರಣದ ಅವಶ್ಯಕತೆ ಇದೆಯೋ' ಹಾಗೆ 'ಕನ್ನಡಕ್ಕೆ ಕನ್ನಡದ್ದೇ ಆದ ಸಂಧಿಕಾರ್ಯದ ಅವಶ್ಯಕತೆ ಇದೆ ಎಂಬುದನ್ನು ಬಿಂಬಿಸುವುದೇ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

**ಸ್ವರೂಪ**

ಆದಿಕಾಲದಿಂದಲೂ ಆಧುನಿಕ ಕಾಲದವರೆಗೆ ಕನ್ನಡ ವ್ಯಾಕರಣವನ್ನು ಕುರಿತು ಅಧ್ಯಯನಗಳು ನಡೆದುಕೊಂಡು ಬಂದಿವೆ ಹಾಗೂ ನಡೆಯುತ್ತಲೂ ಇವೆ. ವ್ಯಾಕರಣದಲ್ಲಿ ಅಕ್ಷರ, ಸಂಧಿ, ಸಮಾಸ, ಆಖ್ಯಾತ, ವಿಭಕ್ತಿ, ಲಿಂಗ, ವಚನ, ನಾಮ, ಕ್ರಿಯೆ, ವಿಶೇಷಣ ಹೀಗೆ ಅಸಂಖ್ಯಾತ ಪರಿಕರಗಳನ್ನು ಕುರಿತ ಅಧ್ಯಯನಗಳು ನಡೆದಿವೆ.

ಕನ್ನಡ ವ್ಯಾಕರಣ ಭಾಗದಲ್ಲಿ ಬಹಳ ಪ್ರಧಾನ ಭಾಗವಾದ ಕನ್ನಡ ಸಂಧಿಗಳ ಅಧ್ಯಯನವನ್ನು ಕುರಿತ ಅನೇಕ ಕೃತಿಗಳು ಹೊರಬಂದಿವೆ. ಇಂತಹ ಒಂದು ಮಹತ್ವದ ಕೃತಿಯಾದ ಡಾ.ಡಿ.ಎನ್. ಶಂಕರಭಟ್ಟರ "ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ" ಎಂಬ ವ್ಯಾಕರಣ ಕೃತಿಯಲ್ಲಿ ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳನ್ನು ಕುರಿತ ಚರ್ಚೆಯನ್ನು ಮಾಡಿದ್ದಾರೆ. ಇವರ ಒಂದು ಸೂಕ್ಷ್ಮವಾದ ಆಲೋಚನೆಗಳನ್ನು ಮುಂದಿಟ್ಟುಕೊಂಡು ಹಾಗೂ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗದ ಭಾಷಾ ಚಿಂತಕರಿಂದ ಸಂಪಾದಿಸಲ್ಪಟ್ಟ ಸಂಪಾದವಾದ ದಿನದಿನ ೧, ೨, ೩ ಕೃತಿಗಳನ್ನು ಅನುಲಕ್ಷಿಸಿ ಹಾಗೂ ಕನ್ನಡ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಕನ್ನಡ ಪಠಪುಸ್ತಕಗಳಲ್ಲಿ ಬಳಕೆಯಾದ ಕೆಲವು ಸಂದಿಯ ಸಮಸ್ಯೆಯ ಸ್ವರೂಪಗಳನ್ನು ಕುರಿತು ಆಲೋಚಿಸಲಾಗಿದೆ.

ಭಾಷೆ ಇಂದು ದಿನದಿಂದ ದಿನಕ್ಕೆ ಸ್ವೀಕರಣ ಗುಣವನ್ನು ಹೊಂದಿ ಪ್ರಗತಿಯತ್ತ ಸಾಗುತ್ತಿದೆ. ನಾವು ಅನೇಕ ಹೊಸ ಪದಗಳನ್ನು ಕಂಡುಕೊಳ್ಳುತ್ತೇವೆ. ಅಂತೆಯೇ ಕನ್ನಡ ಭಾಷೆ ಸಂಸ್ಕೃತ, ಇಂಗ್ಲೀಶ್, ಹಿಂದಿ, ಮರಾಠಿ, ಉರ್ದು, ಅರಾಬಿಕ್ ಇತರೆ ಅನೇಕ ಭಾಷೆಗಳಿಂದ ಪದಸ್ವೀಕರಣ ಗುಣವನ್ನು ಹೊಂದಿ ಇಂದು ಭಾಷೆಯು ಪ್ರಗತಿಯತ್ತ ಸಾಗುತ್ತಿದೆ. ಅಂದಮೇಲೆ ಭಾಷೆಯಲ್ಲಿ ಪ್ರಗತಿಯನ್ನು ಸಾಧಿಸಿರುವ ನಾವು ಅಂತಹ ಸಂಧಿಗಳನ್ನು ಗುರುತಿಸುವಾಗ

ಪ್ರಾಚೀನವಾಗಿ ಗುರುತಿಸಿಕೊಂಡಿರುವ ಕನ್ನಡ ಸಂಧಿ ಹಾಗೂ ಸಂಸ್ಕೃತ ಸಂಧಿಗಳು ಎಂದು ವಿಭಾಗಿಸಿಕೊಂಡಿದ್ದೇವೆ. ಕಾರಣ ಈ ಪಾರಂಪರಿಕ ಸಂಧಿ ವಿಧಾನಗಳಿಂದ ಪ್ರಸ್ತುತ ಸಂದರ್ಭದ ಕಲಿಕೆಯಲ್ಲಿ ಉಂಟಾಗುವಂತಹ ಕನ್ನಡ ಸಂಧಿ : ಸಮಸ್ಯೆಯ ಸ್ವರೂಪಗಳನ್ನು ಕುರಿತು ಅಧ್ಯಯನದ ಪ್ರಸ್ತುತ ಅಧ್ಯಯನದ ಸ್ವರೂಪವಾಗಿದೆ.

**ಕನ್ನಡ ಸಂಧಿ ಅಧ್ಯಯನಗಳ ಮುಂದಿರುವ ಸವಾಲುಗಳು**

ಮೊದಲನೆಯದಾಗಿ ಕನ್ನಡದ ಈ ವ್ಯಾಕರಣ ಪಠ್ಯಪುಸ್ತಕಗಳಲ್ಲಿ ಕನ್ನಡ ಸಂಧಿಗಳು ಯಾವುವು ಮತ್ತು ಸಂಸ್ಕೃತ ಸಂಧಿಗಳು ಯಾವುವು ಎಂಬುದನ್ನು ಬೇರೆ ಬೇರೆಯಾಗಿ ಹೇಳಲಾಗಿದೆ. ಯಾವ ರೀತಿಯಲ್ಲಿ ಅವು ಒಂದಕ್ಕಿಂತ ಒಂದು ಭಿನ್ನವಾಗಿವೆ ಎಂಬುದನ್ನು ವಿವರಿಸಲು ಯತ್ನಿಸಿಲ್ಲ.

ಎರಡನೆಯದಾಗಿ ಕನ್ನಡ ಸಂಧಿಗಳು ಯಾವುದೆಂಬುದನ್ನು ವಿವರಿಸುವಾಗ ಹೊಸಗನ್ನಡ ಮತ್ತು ಹಳಗನ್ನಡಗಳ ನಡುವಿರುವ ವ್ಯತ್ಯಾಸವನ್ನು ಗಮನಿಸಿಲ್ಲ. ಮೊದಲಿಗೆ ಹೊಸಗನ್ನಡದ (ಸೇರಿಕೆಯ) ಸಂಧಿ ನಿಯಮಗಳು ಯಾವುದೆಂಬುದನ್ನು ಹೊಸಗನ್ನಡದವೇ ಆದ ಉದಾಹರಣೆಗಳ ಮೂಲಕ ವಿವರಿಸಿ ಹೇಳಿ. ಅನಂತರ ಬೇಕಿದ್ದರೆ ಅವಕ್ಕಿಂತ ಭಿನ್ನವಾಗಿರುವ ಸಂಧಿ ನಿಯಮಗಳು ಹಳೆಗನ್ನಡದಲ್ಲಿ ಕಾಣಿಸಿಕೊಳ್ಳುತ್ತವೆ. ಕಾಣಿಸಿಕೊಳ್ಳದಿದ್ದಲ್ಲಿ ಅವು ಎಂತಹವು ಎಂಬುದನ್ನು ವಿವರಿಸಿದಲ್ಲಿ ವಿದ್ಯಾರ್ಥಿಗಳಿಗೆ ಅವನ್ನು ಅರ್ಥಮಾಡಿಕೊಳ್ಳಲು ಹೆಚ್ಚು ಸುಲಭವಾಗಬಲ್ಲದು.

ಮೂರನೆಯದಾಗಿ ನಿಜಕ್ಕೂ ಸಂಸ್ಕೃತದಲ್ಲಿ ಎಂತಹ ಸಂಧಿ ನಿಯಮಗಳೆಲ್ಲ ಕಾಣಿಸಿಕೊಳ್ಳುತ್ತವೆ ಎಂಬುದನ್ನು ಕನ್ನಡ ವ್ಯಾಕರಣದಲ್ಲಿ ನೇರವಾಗಿ ವಿವರಿಸುವ ಅವಶ್ಯಕತೆ ಇಲ್ಲ. ಕನ್ನಡಕ್ಕಿಂತ ಭಿನ್ನವಾದ ಸಂಧಿ ನಿಯಮಗಳು ಹಿಂದಿ, ಮರಾಠಿ, ಇಂಗ್ಲೀಶ್, ಅರಾಬಿಕ್ ಮೊದಲಾದ ಭಾಷೆಗಳಲ್ಲೂ ಕಾಣಿಸುತ್ತಿದ್ದು, ಅವನ್ನೆಲ್ಲ ಹೇಗೆ ಕನ್ನಡ ವ್ಯಾಕರಣದಲ್ಲಿ ವಿವರಿಸುವ ಅವಶ್ಯಕತೆಯಿಲ್ಲವೋ ಹಾಗೆಯೇ ಸಂಸ್ಕೃತದ ಸಂಧಿ ನಿಯಮಗಳನ್ನೂ ಕನ್ನಡದ ವ್ಯಾಕರಣದಲ್ಲಿ ವಿವರವಾಗಿ ತಿಳಿಸಿ ಹೇಳುವ ಅವಶ್ಯಕತೆಯಿಲ್ಲ.

ಹೀಗಿದ್ದರೂ ಸಂಸ್ಕೃತದಿಂದ ಎರವಲಾಗಿ ಬಂದಿರುವ ಹಲವಾರು ಪದಗಳು ಕನ್ನಡದಲ್ಲಿ ಬಳಕೆಯಲ್ಲಿಲ್ಲ. ಕಾರಣ ಅವುಗಳಲ್ಲಿ ಕಾಣಿಸುವ ಸಂಧಿ ನಿಯಮಗಳೆಂತಹವು ಎಂಬುದನ್ನು ವಿವರಿಸುವುದರಿಂದ ವಿದ್ಯಾರ್ಥಿಗಳಿಗೆ ಪ್ರಯೋಜನವಾಗಬಲ್ಲದು. ಹಿಂದಿ, ಇಂಗ್ಲೀಶ್ ಮೊದಲಾದ ಭಾಷೆಗಳಿಂದಲೂ ಕನ್ನಡಕ್ಕೆ ಹಲವು ಪದಗಳು ಎರವಲಾಗಿ ಬಂದಿವೆಯೇನೋ ನಿಜ. ಆದರೆ ಸಂಸ್ಕೃತದಿಂದ ಎರವಲಾಗಿ ಬಂದ ಪದಗಳಿಗೆ ಕನ್ನಡದಲ್ಲಿ ಇರುವಂತಹ ವಿಶಿಷ್ಟವಾದ ಸ್ಥಾನ

ಆ ಪದಗಳಿಗಿಲ್ಲ. ಹಾಗಾಗಿ ಕನ್ನಡ ವ್ಯಾಕರಣದಲ್ಲಿ ಇತರ ಭಾಷೆಗಳ ಸಂಧಿ ನಿಯಮಗಳಿಗಿಂತ ಸಂಸ್ಕೃತದ ಸೇರಿಕೆಯ ನಿಯಮಗಳಿಗೆ ಒಂದು ವಿಶಿಷ್ಟವಾದ ಸ್ಥಾನವನ್ನು ಕೊಟ್ಟಿರುವೆವಷ್ಟೇ. ಆದರೆ ಸಂಸ್ಕೃತದ (ಸೇರಿಕೆಯ) ಸಂಧಿ ನಿಯಮಗಳ ವರ್ಣನೆಯನ್ನು ನೇರವಾಗಿ ಅದರ ವ್ಯಾಕರಣದಿಂದ ಎತ್ತಿ ಕನ್ನಡ ವ್ಯಾಕರಣದಲ್ಲಿ ಇರಿಸುವ ಬದಲು, ಕನ್ನಡ ವ್ಯಾಕರಣವನ್ನು ಕಲಿಯುವವರಿಗೆ ಅನುಕೂಲವಾಗುವ ಹಾಗೆ ಅದನ್ನು ಅಳವಡಿಸಿಕೊಂಡಲ್ಲಿ ಅದು ಹೆಚ್ಚು ಉಪಯುಕ್ತವಾಗಬಲ್ಲದು.

ಸಂಸ್ಕೃತದಲ್ಲಿ ಬಳಕೆಯಾಗುವ ಸಂಧಿ ನಿಯಮಗಳನ್ನು ಕನ್ನಡ ಕಲಿಯುವ ಮಕ್ಕಳಿಗೆ ಅರ್ಥವಾಗುವ ಹಾಗೆ ಮತ್ತು ಸಹಾಯಕವಾಗುವ ಹಾಗೆ ತಿಳಿಸಿ ಹೇಳಬೇಕಿದ್ದಲ್ಲಿ ಮೊದಲಿಗೆ ಸಂಸ್ಕೃತದಿಂದ ಹೊಸಗನ್ನಡಕ್ಕೆ ಎಂತಹ ಪದಗಳೆಲ್ಲ ಎರವಲಾಗಿ ಬಂದಿವೆ ಎಂಬುದನ್ನು ಪರಿಶೀಲಿಸಬೇಕು. ಆ ಪದಗಳಲ್ಲಿ ಕನ್ನಡದ ಸಂಧಿ ನಿಯಮಗಳಿಗಿಂತ ಭಿನ್ನವಾಗಿರುವ ನಿಯಮಗಳು ಎಂತಹವೆಲ್ಲ ಕಾಣಿಸಿಕೊಳ್ಳುತ್ತವೆ ಎಂಬುದನ್ನು ಕಂಡುಹಿಡಿಯಬೇಕು.

ಉದಾಹರಣೆಗೆ:

| **ಸಂಸ್ಕೃತದ ಸಂಧಿ ನಿಯಮಗಳು** | **ಕನ್ನಡದ ಸಂಧಿ ನಿಯಮಗಳು** |
|---|---|
| ದೇಶ + ಅಭಿಮಾನ = ದೇಶಾಭಿಮಾನ | ಚಿಕ್ಕ + ಅಮ್ಮ = ಚಿಕ್ಕಮ್ಮ |
| ಕವಿ + ಇಂದ್ರ = ಕವೀಂದ್ರ | ಅಲ್ಲಿ + ಇಲ್ಲ = ಅಲ್ಲಿಲ್ಲ |
| ಗುರು + ಉಪದೇಶ = ಗುರೂಪದೇಶ | ಕಲ್ಲು + ಉಪ್ಪು = ಕಲ್ಲುಪ್ಪು |

ಮೇಲೆ ಕೊಟ್ಟಿರುವ ಸಂಸ್ಕೃತ ಉದಾಹರಣೆಗಳಲ್ಲಿ 'ಅ' ಕಾರಕ್ಕೆ 'ಅ' ಕಾರ ಪರವಾದಾಗ ಅವೆರಡರ ಬದಲು 'ಆ'ಕಾರವೂ, 'ಇ'ಕಾರಕ್ಕೆ 'ಇ'ಕಾರ ಪರವಾದಾಗ ಅವೆರಡರ ಬದಲು 'ಈ' ಕಾರವೂ ಮತ್ತು 'ಉ'ಕಾರಕ್ಕೆ 'ಉ'ಕಾರ ಪರವಾದಾಗ ಅವೆರಡರ ಬದಲು 'ಊ'ಕಾರವೂ ಆದೇಶವಾಗಿ ಬಂದಿದೆ. ಇವಕ್ಕೆ ಬದಲು ಅವುಗಳ ಎದುರಿಗೆ ಕೊಟ್ಟಿರುವ ಕನ್ನಡದ ಉದಾಹರಣೆಗಳಲ್ಲಿ ಮೊದಲನೆಯ ಪದದ ಕೊನೆಯ ಸ್ವರ ಬಿದ್ದುಹೋಗಿದೆ. (ಲೋಪಗೊಂಡಿದೆ) ಮತ್ತು ಎರಡನೆಯ ಪದದ ಮೊದಲನೆಯ ಸ್ವರ ಬದಲಾವಣೆ ಹಾಗೆಯೇ ಉಳಿದಿದೆ.

ಈ ರೀತಿ ಒಟ್ಟು ಸೇರುವ ಒಂದೇ ರೀತಿಯ ಎರಡು ಸ್ವರಗಳಲ್ಲಿ ಒಂದು ಮೊದಲಿಗೇನೇ ಉದ್ದ (ದೀರ್ಘ) ಸ್ವರವಾಗಿತ್ತಾದರೆ, ಸಂಸ್ಕೃತದಲ್ಲಿ ಅದು ಹಾಗೆಯೇ ಉಳಿಯುತ್ತದೆ. ಅದರೊಡನೆ ಬಂದಿರುವ ಇನ್ನೊಂದು ಸ್ವರ ಬಿದ್ದುಹೋಗುತ್ತದೆ. ಎರಡೂ ಉದ್ದ ಸ್ವರಗಳಾಗಿರುವಾಗಲೂ ಒಂದು ಉದ್ದ (ದೀರ್ಘ) ಸ್ವರ ಉಳಿಯುತ್ತದೆ.

ಇಲ್ಲೂ ಕೂಡಾ ಮೇಲಿನ ಆದೇಶ ಸಂಧಿಯೇ ನಡೆಯುವುದೆಂದೂ (ಎಂದರೆ ಆ ಎರಡೂ ಸ್ವರಗಳ ಜಾಗದಲ್ಲಿ ಉದ್ಧ ಸ್ವರವೊಂದು ಆದೇಶವಾಗಿ ಬರುವುದೆಂದೂ) ಹೇಳಲು ಸಾಧ್ಯವಿದೆ.

ಕನ್ನಡದಲ್ಲಿ ಇಂತಹ ಸಂದರ್ಭಗಳಲ್ಲೂ ಮೊದಲನೆಯ ಸ್ವರ ಬಿದ್ದು ಹೋಗುತ್ತದೆ. ಮತ್ತು ಎರಡನೆಯದು ಉಳಿಯುತ್ತದೆ. ಈ ರೀತಿ ಮಾಡಿದಲ್ಲಿ ವಿದ್ಯಾರ್ಥಿಗಳಿಗೆ ಅವುಗಳನ್ನು ಅರ್ಥ ಮಾಡಿಕೊಳ್ಳಲು ಹೆಚ್ಚು ಸುಲಭವಾಗುತ್ತವೆ ಎಂದು ಡಾ.ಡಿ.ಎನ್.ಎಸ್.ಭಟ್‌ರ ನಿಲುವಾಗಿದೆ. ಕನ್ನಡ ವ್ಯಾಕರಣದ ಪಠ್ಯಪುಸ್ತಕಗಳಲ್ಲಿ ಕಾಣಿಸುವ ಹಾಗೆ ಗಂಗೋರ್ಮಿ, ಮೇಘೌಘ, ಮಹೌಜ, ನದದ್ದಮರುಕ, ಲಸತ್ತೋಡಷ, ಆಯಷ್ಪಂಕ ಮೊದಲಾದ ಕನ್ನಡ ಬರಹಗಳಲ್ಲೆಲ್ಲೂ (ವ್ಯಾಕರಣ ಪಠ್ಯಪುಸ್ತಕಗಳನ್ನು ಬಿಟ್ಟು) ಕಾಣಿಸಿದಿರುವಂತಹ ಸಂಸ್ಕೃತದ ಪದಗಳನ್ನು ಇಲ್ಲವೇ ಪದಕಂತೆಗಳನ್ನು ಸಂಸ್ಕೃತದ ಸಂಧಿ ನಿಯಮಗಳಿಗೆ ಉದಾಹರಣೆಗಳಾಗಿ ಕೊಟ್ಟಲ್ಲಿ ಕನ್ನಡವನ್ನು ಕಲಿಯಬೇಕೆಂದಿರುವ ವಿದ್ಯಾರ್ಥಿಗಳಿಗೆ ಅನವಶ್ಯಕವಾಗಿ ತೊಂದರೆಯುಂಟಾಗಬಲ್ಲುದಲ್ಲದೆ ಅದರಿಂದ ಅವರಿಗೆ ಯಾವ ಪ್ರಯೋಜನವೂ ಸಿಗಲಾರದು.

ಕನ್ನಡದಲ್ಲಿ ಕಾಣಿಸುವ ಸಂಧಿ ನಿಯಮಗಳಿಗೂ ಸಂಸ್ಕೃತದಲ್ಲಿ ಕಾಣಿಸುವ ಸಂಧಿ ನಿಯಮಗಳ ನಡುವೆ ಹಲವು ಮುಖ್ಯವಾದ ವ್ಯತ್ಯಾಸಗಳಿವೆ. ಕನ್ನಡದ ಸಂಧಿನಿಯಮಗಳು ಹೇಗಿವೆ ಎಂಬುದನ್ನು ತಿಳಿಯಲು ಸಂಸ್ಕೃತದ ಸೇರಿಕೆಯ ನಿಯಮಗಳು ಹೇಗಿವೆ ಎಂಬುದನ್ನು ತಿಳಿಯುವ ಅವಶ್ಯಕತೆ ಕನ್ನಡ ಸಂಧಿಗಳಲ್ಲಿದೆ.

ಕನ್ನಡ ಸಂಧಿ ನಿಯಮಗಳು ಪದಗಳ ಮಧ್ಯೆ ಮತ್ತು ಪದಗಳ ಕೊನೆಯಲ್ಲಿ ಬೇರೆ ಬೇರೆಯಾಗಿರುತ್ತದೆ. ಇದಲ್ಲದೆ, ಸಂಧಿ ನಿಯಮಕ್ಕೆ ಒಳಪಡುವ ವರ್ಣಪ್ರಕೃತಿಯದ್ದೋ, ಪ್ರತ್ಯಯದ್ದೋ, ಪದ ಪ್ರತ್ಯಯದ್ದೋ, ಪದರೂಪ ಪ್ರತ್ಯಯದ್ದೋ, ಕ್ರಿಯಾಪ್ರಕೃತಿಯದ್ದೋ, ನಾಮಪ್ರಕೃತಿಯದ್ದೋ, ಕನ್ನಡ ಪದದ್ದೋ, ಸಂಸ್ಕೃತ, ತೆಲುಗು, ಮರಾಠಿ, ಇಂಗ್ಲೀಶ್, ಅರಾಬಿಕ್ ಇತ್ಯಾದಿ ಯಾವ ಭಾಷೆಯಿಂದ ಎರವಲಾಗಿ ಬಂದ ಪದದ್ದೋ, ಪ್ರಕೃತಿಯಲ್ಲಿ ಛಂದೋ ಮಾತ್ರೆಗಳೆಷ್ಟಿವೆ, ಸಂಧಿಯ ನಿಯಮಕ್ಕೆ ಒಳಪಡುವ ಮೊದಲಾದ ಹಲವಾರು ವಿಷಯಗಳನ್ನು ಗಮನದಲ್ಲಿಟ್ಟುಕೊಳ್ಳದೆ, ಕನ್ನಡದ ಸಂಧಿ ನಿಯಮಗಳೆಂತವು ಎಂಬುದನ್ನು ವಿವರಿಸಿ ಹೇಳಲು ಸಾಧ್ಯವಾಗದು. ಈ ವಿಷಯದಲ್ಲೂ ಸಂಸ್ಕೃತ ಸಂಧಿಗಳಿಗಿಂತ ಭಿನ್ನವಾದ ಕನ್ನಡ ಸಂಧಿನಿಯಮಗಳನ್ನು ವಿವರಿಸಲು ಅದರದೇ ಆದ ಕನ್ನಡ ಸಂಧಿಯೊಂದನ್ನು ಗುರುತಿಸಲು ಸಾಧ್ಯವೇ ಎನ್ನುವುದು ಪ್ರಸ್ತುತವಾಗಿದೆ.

ಉದಾಹರಣೆಗೆ: ಡಾಲರೇತರ, ವೈನೋದಕ ಎಂಬ ಪದಗಳನ್ನು ತೆಗೆದುಕೊಂಡಾಗ ಡಾಲರ್ + ಇತರ = ಡಾಲರೇತರ ಎಂಬ ಸೇರಿಕೆಯ ನಿಯಮದಲ್ಲಿ ಡಾಲರ್ ಎಂಬ ಪೂರ್ವಪದ ಇಂಗ್ಲೀಶ್ ಪದವಾಗಿದೆ. ಇತರ ಎಂಬ ಉತ್ತರಪದ ಸಂಸ್ಕೃತ ಪದವಾಗಿದೆ. ಕಾರಣ ಈ ಪದವನ್ನು ಯಾವ ಸಂಧಿ ನಿಯಮಕ್ಕೆ ಅಳವಡಿಸಬೇಕು ಎಂಬುದು ಒಂದು ಸಮಸ್ಯೆ

ವೈನ್ + ಉದಕ = ವೈನೋದಕ ಎಂಬ ಪದದಲ್ಲಿ ವೈನ್ ಎಂಬ ಪೂರ್ವಪದವು ಇಂಗ್ಲೀಶ್ ಪದವಾಗಿದೆ. ಅವರೆಡೂ ಪದ ಸೇರಿ ಸಂಸ್ಕೃತದ ಗುಣಸಂಧಿ ನಿಯಮಕ್ಕೆ ಅನುಸಾರವಾಗಿ ಪದ ರಚನೆಗಳನ್ನು ಮಾಡಲಾಗಿದೆ. ಆದರೆ ಇಲ್ಲಿ ಸೇರಿರುವ ಪೂರ್ವೋತ್ತರ ಪದಗಳೆರಡೂ ಬೇರೆ ಬೇರೆ ಭಾಷೆಗಳ ಘಟಕಗಳಾಗಿವೆ.

ಕಾನೂನು + ಉಲ್ಲಂಘನೆ = ಕಾನೂನೋಲ್ಲಂಘನೆ ಎಂಬ ಪದದಲ್ಲಿ ಕಾನೂನು ಪೂರ್ವಪದವು ಪರ್ಶಿಯಾ, ಅರಾಬಿಕ್ ಪದವಾಗಿದೆ. ಉಲ್ಲಂಘನೆ ಎಂಬ ಉತ್ತರ ಪದ ಸಂಸ್ಕೃತವಾಗಿದೆ. ಆದರೆ ಇಲ್ಲಿ ಅನುಸರಿಸಿರುವ ಸಂಧಿ ನಿಯಮ ಮಾತ್ರ ಸಂಸ್ಕೃತವಾಗಿದೆ. ಅದರಲ್ಲಿ ಪೂರ್ವ ಪದದ ಅಂತ್ಯಾಕ್ಷರ ಸ್ವರದಿಂದ ಕೂಡಿರಬೇಕು. ಅದು ವ್ಯಂಜನದಿಂದ ಅಂತ್ಯವಾಗಿದೆ. ಕಾರಣ ಸಂಸ್ಕೃತ ಸಂಧಿಯ ನಿಯಮಗಳಲ್ಲಿಯೇ ಕೆಲವು ನಿಯಮಗಳು ಉಲ್ಲಂಘನೆಯಾಗಿವೆ. ಅದೇನೇ ಇರಲಿ ಇಂತಹ ಅನೇಕ ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳಾಗಿವೆ. ಇದು ಪ್ರಸ್ತುತ ಅಧ್ಯಯನದ ವಸ್ತುವಾಗಿದೆ.

**ಪ್ರಸ್ತುತ ಅಧ್ಯಯನದ ರೂಪುರೇಷೆ ಹೀಗಿದೆ.**

ಅಧ್ಯಯನದ ವಿಷಯ 'ಕನ್ನಡ ಸಂಧಿ ಸಮಸ್ಯೆಯ ಸ್ವರೂಪ' ಎಂಬ ಶೀರ್ಷಿಕೆಯ ನಿಬಂಧವು ಡಾ.ಡಿ.ಎನ್.ಶಂಕರಭಟ್‌ರವರ ಕನ್ನಡ ಸಂಧಿ ಸಮಸ್ಯೆಯ ಸ್ವರೂಪ ಕುರಿತು ಚರ್ಚೆಯ ನಿಲುವುಗಳನ್ನಾಧರಿಸಿದೆ. ಈ ನಿಬಂಧವನ್ನು ವ್ಯಾಪ್ತಿಯ ದೃಷ್ಟಿಯಿಂದ ಐದು ಅಧ್ಯಾಯಗಳನ್ನಾಗಿ ರಚಿಸಿಕೊಳ್ಳಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ನಿಬಂಧಕ್ಕೆ ಪ್ರಸ್ತಾವನೆಯನ್ನು ಕೊಡಲಾಗಿದೆ. ಎರಡನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಗೆ ಸಂಬಂಧಿಸಿದಂತಹ ವಿಷಯಗಳಿವೆ.

ಮೂರನೇ ಅಧ್ಯಾಯದಲ್ಲಿ ಕನ್ನಡ ಸಂಧಿ ಸ್ವರೂಪ ಎಂಬ ಅಧ್ಯಾಯದಲ್ಲಿ ಕನ್ನಡ ವ್ಯಾಕರಣದಲ್ಲಿ ಕಾಣುವ ಕನ್ನಡ ಸಂಧಿಗಳ ವಿವರಣಾತ್ಮಕವಾದ ಹಾಗೂ ಉದಾಹರಣೆ ಸಹಿತವಾದ ಸಂಧಿ ಪ್ರಕಾರಗಳನ್ನು ಒಳಗೊಂಡದ್ದಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳನ್ನು ಕುರಿತಂತೆ ಉದಾಹರಣೆ ಸಹಿತವಾಗಿ ಅವುಗಳಲ್ಲಿ ಉಂಟಾಗಿರುವ ಧ್ವನಿ ವ್ಯತ್ಯಾಸ, ಭಾಷೆ ವ್ಯತ್ಯಾಸಗಳನ್ನು ನಿಖರವಾಗಿ ತೋರುವ ಮುಖೇನ ಚರ್ಚಿಸಲಾಗಿದೆ.

ಕೊನೆಯದಾಗಿ ಐದನೇ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಈ ಪ್ರಕಾರವಾಗಿ ತನ್ನ ರೂಪುರೇಷೆ ಪಡೆದುಕೊಂಡಿದೆ.

## ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಆಕರವನ್ನು ಕನ್ನಡ ಪಠ್ಯ ಪುಸ್ತಕಗಳಿಂದ ಮತ್ತು ಕನ್ನಡ ಭಾಷಾಧ್ಯಯನ ವಿಭಾಗದಿಂದ ಪ್ರಕಟವಾಗಿರುವ ದಿನದಿನ ೧, ೨, ೩ ಕೃತಿಗಳಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಅಂದರೆ ಕನ್ನಡ ಸಂಧಿಕಾರ್ಯವನ್ನು ವಿವರಿಸುವಾಗ ಪಾರಂಪರಿಕ ಮತ್ತು ಆಧುನಿಕ ಎರಡು ನೆಲೆಗಳಲ್ಲಿ ವಿಶ್ಲೇಷಣೆಯ ಹಂತದ ಮಿತಿಗಳನ್ನು ಗುರುತಿಸಲಾಗಿದೆ.

ಡಾ. ಡಿ.ಎನ್.ಶಂಕರ್‌ಭಟ್ ಅವರು ಸಂಧಿ ಸೇರಿಕೆಯ ನಿಯಮಗಳನ್ನು ವಿವರಿಸುವಾಗ ಬಳಸಿಕೊಂಡಿರುವ ಪರಿಭಾಷೆಗಳು ಮತ್ತು ಅವುಗಳ ಹಿಂದಿನ ರೂಪಗಳನ್ನು ಕೊಡಲಾಗುವುದು. ಅವುಗಳ ಅನನ್ಯತೆಯನ್ನು ಕುರಿತು ಚರ್ಚಿಸಲಾಗುವುದು. ಇದು ಪ್ರಸ್ತುತ ಅಧ್ಯಯನದ ವ್ಯಾಪ್ತಿಯೂ ಹೌದು. ಮಿತಿಯೂ ಹೌದು.

## ಕನ್ನಡ ಸಂಧಿ : ಸ್ವರೂಪ

'ಸಂಧಿ ಎಂದರೆ ಎರಡು ಅಕ್ಷರಗಳು ಕಾಲವಿಳಂಬವಿಲ್ಲದೆ ಅರ್ಥಕ್ಕೆ ಧಕ್ಕೆ ಬಾರದಂತೆ ಅರ್ಥಕ್ಕನುಗುಣವಾಗಿ ಪರಸ್ಪರ ಕೂಡುವುದೇ ಸಂಧಿ ಅಥವಾ ಸಂಧಿಕಾರ್ಯ ಎನ್ನುವರು.' ಕನ್ನಡ ವ್ಯಾಕರಣ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ ಸ್ಥಾನವೆಂದರೆ ಅಕ್ಷರಗಳ ನಂತರದ ಸ್ಥಾನವನ್ನು ಸಂಧಿಗಳು ಪಡೆದುಕೊಳ್ಳುತ್ತವೆ. ಕನ್ನಡ ವ್ಯಾಕರಣ ಪರಂಪರೆಯನ್ನು ಅವಲೋಕಿಸಿದರೆ ಕನ್ನಡ ವ್ಯಾಕರಣ ಪರಂಪರೆಯನ್ನು ಪ್ರಮುಖವಾಗಿ ಮೂರು ಪ್ರಕಾರಗಳಲ್ಲಿ ಕಾಣುತ್ತೇವೆ. ಅವುಗಳು

* ಸಂಸ್ಕೃತದ ವ್ಯಾಕರಣ ಪರಂಪರೆಯಲ್ಲಿ ತಯಾರಾಗಿರುವ ಕೇಶೀರಾಜನ ಶಬ್ದಮಣಿದರ್ಪಣ, ಭಟ್ಟಾಳಂಕನ ಶಬ್ದಾನುಶಾಸನ ಮತ್ತು ಇನ್ನಿತರೆ ಹಲವಾರು ಹಳಗನ್ನಡ ವ್ಯಾಕರಣಗಳು ಒಂದು ವಿಭಾಗಕ್ಕೆ ಸೇರುತ್ತವೆ. ಆರಂಭದಲ್ಲಿ ಶಾಲಾ ಕಾಲೇಜುಗಳಲ್ಲಿ ಪಠ್ಯಗಳಾಗಿ ಬಳಕೆಯಾಗುತ್ತಿರುವ ಹೆಚ್ಚಿನ ವ್ಯಾಕರಣಗಳು ಈ ವಿಭಾಗಕ್ಕೆ ಸೇರುತ್ತವೆ.

* ಹತ್ತೊಂಬತ್ತನೇ ಶತಮಾನದಿಂದೀಚೆಗೆ ಮುಖ್ಯವಾಗಿ ಕ್ರೈಸ್ತ ಮಿಶನರಿಗಳು ಇಂಗ್ಲೀಶ್‌ನಲ್ಲಿ ಬರೆದಿರುವ ಹೊಸಗನ್ನಡ ವ್ಯಾಕರಣಗಳು ಎರಡನೇ ವಿಭಾಗಕ್ಕೆ ಸೇರುತ್ತವೆ. ಇವುಗಳೆನ್ನೆಲ್ಲ ಯುರೋಪಿಯನ್ ವ್ಯಾಕರಣ ಪರಂಪರೆಯಲ್ಲಿ ರಚಿಸಲಾಗಿದೆ.

* ಆಧುನಿಕ ಭಾಷಾ ವಿಜ್ಞಾನಗಳು ಮತ್ತು ವ್ಯಾಕರಣಕಾರರು ರಚಿಸಿರುವ ಕನ್ನಡ ವ್ಯಾಕರಣ ಗ್ರಂಥಗಳು ಮತ್ತು ಲೇಖನಗಳು ಮೂರನೆಯ ವಿಭಾಗಕ್ಕೆ ಸೇರುತ್ತವೆ. ಇವುಗಳನ್ನು ಮುಖ್ಯವಾಗಿ ಅಮೇರಿಕದ ಇಂಗ್ಲೀಶ್ ವ್ಯಾಕರಣ ಪರಂಪರೆಯಲ್ಲಿ ರಚಿಸಿದವುಗಳಾಗಿವೆ.

ಕನ್ನಡದ ಈ ಮೂರು ವ್ಯಾಕರಣ ಪರಂಪರೆಗಳಲ್ಲಿ ಕೊನೆಯ ಎರಡು ಪ್ರಕಾರಗಳು ಇಂದು ನಮ್ಮ ಪ್ರಾಥಮಿಕ ಹಂತದಿಂದ ಪ್ರಾರಂಭಗೊಂಡು, ಪ್ರೌಢ, ಪದವಿಪೂರ್ವ ಹಂತ ಹಾಗೂ ಪದವಿ ಹಂತಗಳ ವ್ಯಾಕರಣ ಕಲಿಕೆಯಲ್ಲಿ ಅಭ್ಯಾಸ ಮಾಡುವ ವ್ಯಾಕರಣಗಳಾಗಿವೆ.

ಕನ್ನಡ ಸಂಧಿಗಳ ಪರಂಪರೆಯು ಈ ವಿಧಾನಗಳಿಗೆ ಹೊರತಾದುದಲ್ಲ. ಈ ಪಾರಂಪರಿಕ ಹಿನ್ನೆಲೆಯಲ್ಲಿ ಬೆಳೆದು ಬಂದ ಕನ್ನಡ ಸಂಧಿಗಳು ಕೊನೆಯ ಎರಡು ಅಂದರೆ ಯೂರೋಪಿಯನ್

ವ್ಯಾಕರಣ ಮಾದರಿ ಹಾಗೂ ಇಂಗ್ಲೀಶ್ ವ್ಯಾಕರಣ ಮಾದರಿಗಳಿಗೆ ಅಧೀನವಾಗಿ ರಚಿಸಲ್ಪಟ್ಟು ಅಭ್ಯಾಸಕ್ಕೆ ನೆರವಾಗಿದೆ.

ಪ್ರಾಥಮಿಕ, ಪ್ರೌಢ, ಪೂರ್ವ ಪದವಿ ಹಾಗೂ ಪದವಿ ಹಂತಗಳ ಕಲಿಕೆ ಕೇವಲ ಅಭ್ಯಾಸಕ್ಕೆ ಅನುಕೂಲವಾಗುವಂತೆ ಅನೇಕ ಹೊಸಗನ್ನಡ ವ್ಯಾಕರಣಗಳು ರಚಿಸಲ್ಪಟ್ಟಿವೆ.

ಅಭ್ಯಾಸ, ಕಲಿಕೆ, ಅಧ್ಯಯನಕ್ಕೆ ಅನುಕೂಲವಾಗುವಂತೆ ಕನ್ನಡ ವ್ಯಾಕರಣದಲ್ಲಿ ಸಂಧಿಗಳನ್ನು ಬಹಳ ಪ್ರಧಾನವಾಗಿ ಎರಡು ಪ್ರಕಾರಗಳನ್ನು ಮಾಡಲಾಗಿದೆ. ಅವುಗಳೆಂದರೆ ಕನ್ನಡ ಸಂಧಿಗಳು ಮತ್ತು ಸಂಸ್ಕೃತ ಸಂಧಿಗಳೆಂದು ಕನ್ನಡ ವ್ಯಾಕರಣದಲ್ಲಿ ಸಂಸ್ಕೃತ ಸಂಧಿಗಳೇಕೆ? ಎಂಬ ಪ್ರಶ್ನೆ ಎದುರಾಗಬಹುದು. ಆದರೆ ಸಂಸ್ಕೃತವು ದೇವಭಾಷೆಯಾಗಿದ್ದು, ಕನ್ನಡದಲ್ಲಿ ಬಳಸುವ ಅನೇಕ ಪದಗಳು ಸಂಸ್ಕೃತದಿಂದ ನೇರವಾಗಿ ಬಂಧವುಗಳು ಹಾಗೂ ಕೆಲವು ಪರೋಕ್ಷವಾಗಿ ಕನ್ನಡೀಕರಣವಾಗಿ ಬಂದವುಗಳು ಸೇರಿಯಾಗುವುದರಿಂದ ಸಂಸ್ಕೃತಕ್ಕೆ ವಿಶೇಷವಾದ ಸ್ಥಾನವನ್ನು ಪಾರಂಪರಿಕವಾಗಿ ಪಡೆದಿದೆಯಾದ್ದರಿಂದ ಕನ್ನಡ ವ್ಯಾಕರಣದಲ್ಲಿ ಸಂಸ್ಕೃತಕ್ಕೆ ಪ್ರಾಶಸ್ತ್ಯ ಕೊಡಲಾಗಿದೆ. ಅದೇ ತೆರನಾಗಿ ಕನ್ನಡ ಸಂಧಿಗಳಲ್ಲಿ ಸಂಸ್ಕೃತ ಸಂಧಿಗಳು ಅಧ್ಯಯನಕ್ಕೆ ಯೋಗ್ಯವಾಗಿವೆ.

ಕನ್ನಡ ಸಂಧಿಗಳು, ಸಂಸ್ಕೃತ ಸಂಧಿಗಳು ಅವುಗಳಲ್ಲಿ ಮತ್ತೆ ಎರಡೆರಡು ವಿಧಗಳಿವೆ. ಕನ್ನಡ ಸ್ವರಸಂಧಿಗಳು ಎರಡು. ೧. ಲೋಪಸಂಧಿ, ೨. ಆಗಮಸಂಧಿ.

ಕನ್ನಡದ ವ್ಯಂಜನಸಂಧಿ, ೧. ಆದೇಶಸಂಧಿ ಈ ತೆರನಾದ ಕನ್ನಡದ ಸ್ವರ ವ್ಯಂಜನ ಸಂಧಿಗಳಲ್ಲಿ ಮತ್ತೆ ಒಳ ವಿಭಾಗಗಳಿವೆ. ವಿಭಾಗಗಳಿಗೆ ಉಪವಿಭಾಗಗಳಿವೆ. ಅದೇ ತೆರನಾಗಿ ಸಂಸ್ಕೃತದಲ್ಲಿ ಸ್ವರಸಂಧಿಗಳು.

೧. ಸವರ್ಣದೀರ್ಘಸಂಧಿ, ೨. ಗುಣಸಂಧಿ, ೩. ವೃದ್ಧಿಸಂಧಿ ೪. ಯಣ್‌ಸಂಧಿ

**ಸಂಸ್ಕೃತ ವ್ಯಂಜನ ಸಂಧಿಗಳು**

೧. ಜಶ್ತ್ವಸಂಧಿ, ೨. ಶ್ಚುತ್ವಸಂಧಿ, ೩. ಲಕಾರ ದ್ವಿತ್ವಸಂಧಿ, ೪. ಷ್ಟುತ್ವಸಂಧಿ, ೫.ಛತ್ವಸಂಧಿ, ೬. ಅನುನಾಸಿಕ ಸಂಧಿ, ೭. ವಿಸರ್ಗ ಸಂಧಿ.

ನಂತರದಲ್ಲಿ 'ಪ್ರಕೃತಿಭಾವ' ಎಂಬ ವಿಭಾಗೀಕರಣವನ್ನು ಅವಲೋಕಿಸಲಾಗಿದೆ. ಹೀಗೆ ಕನ್ನಡ ವ್ಯಾಕರಣದಲ್ಲಿ "ಕನ್ನಡ ಸಂಧಿಗಳ ವಂಶವೃಕ್ಷವನ್ನು ಮುಂದಿನ ಪುಟದಲ್ಲಿ ಕೊಡಲಾಗಿದೆ.

ನಂತರ ಮುಂದುವರೆದು ಮೇಲ್ಕಾಣಿಸಿದ ಎಲ್ಲಾ ವರ್ಗೀಕರಣ 'ಸಂಧಿಗಳ ಸಂಧಿಗಳನ್ನು ನಕ್ಷೆ'ಯ ಮೂಲಕವಾಗಿ ಇಡೀ ಸಂಧಿಗಳ ಪ್ರಕಾರಗಳ ಅರ್ಥ–ವಿವರಣೆಯನ್ನು ಉದಾಹರಣೆಗಳ ಸಮೇತವಾಗಿ ಪ್ರಸ್ತುತ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಸಂಧಿಗಳು: ಸಂಧಿ ಎಂದರೆ ಎರಡು ಅಕ್ಷರಗಳು ಕಾಲವಿಳಂಬವಿಲ್ಲದೆ ಅರ್ಥಕ್ಕೆ ದಕ್ಕೆ ಬಾರದಂತೆ ಅರ್ಥಕ್ಕನುಸಾರವಾಗಿ ಪರಸ್ಪರ ಕೂಡುವುದೆ ಸಂಧಿ ಅಥವಾ ಸಂಧಿಕಾರ್ಯ ಎನ್ನುವರು.

ನಾವು ಮಾತನಾಡುವಾಗ ವಾಕ್ಯದಲ್ಲಿರುವ ಪ್ರತಿಯೊಂದು ಪದವನ್ನೂ ಬಿಡಿಬಿಡಿಯಾಗಿ ಹೇಳುವುದಿಲ್ಲ. ಆದಷ್ಟುಮಟ್ಟಿಗೆ ಅವುಗಳನ್ನು ಕೂಡಿಸಿ ತಡವಾಗದಂತೆ ಹಾಗೂ ಅರ್ಥಕ್ಕೆ ವ್ಯತ್ಯಯ ಬಾರದಂತೆ ಕೂಡಿಸುವಲ್ಲಿ ಒಂದು ಪದದ ಕೊನೆಯ ವರ್ಣವನ್ನು ಮುಂದಿನ ಪದದ ಮೊದಲ ವರ್ಣದೊಂದಿಗೆ ಸೇರಿಸಿ ಹೇಳಬೇಕಾಗುತ್ತದೆ. ಇದರಿಂದ ಕೆಲವು ಕಡೆಗಳಲ್ಲಿ ವ್ಯತ್ಯಾಸಗಳು ಉಂಟಾಗುತ್ತವೆ.

ಉದಾಹರಣೆಗೆ : ಕನ್ನಡ + ಅನ್ನು = ಕನ್ನಡವನ್ನು ಇಲ್ಲಿ 'ಕನ್ನಡ' ಎಂಬ ಪೂರ್ವಪದಕ್ಕೆ 'ಅನ್ನು' ಎಂಬ ಉತ್ತರ ಪದ ಸೇರಿ ಕನ್ನಡವನ್ನು ಎಂಬ ಸಂಧಿ ಪದ ರಚನೆಯಾಗಿದೆ. 'ಅನ್ನು' ಎಂಬ ಉತ್ತರಪದವು ಸಂಧಿಕ್ರಿಯೆ ನಡೆಯುವಾಗ 'ಅ'ಕಾರಕ್ಕೆ 'ವ'ಕಾರವು ಆಗಮವಾಗಿರುವ ವ್ಯತ್ಯಾಸಗಳು ಕಾಣುತ್ತವೆ. ಹೀಗೆ ಉಚ್ಚಾರಣೆಯಲ್ಲಿ ವರ್ಣಗಳ ನಡುವೆ ಕಾಲವಿಳಂಬವಿಲ್ಲದಂತೆ ಅರ್ಥಕ್ಕೆ ಅನುಸಾರವಾಗಿ ಕ್ರಮ ಹಾಗೂ ಕಾಲಗಳೆರಡನ್ನೂ ಉಳಿಸಿಕೊಡುವುದಕ್ಕೆ ಸಂಧಿ ಎಂದು ಕರೆಯುತ್ತೇವೆ.

ಮುಖ್ಯವಾಗಿ ಸಂಧಿಯಾಗುವಾಗ ಮುಂಚೆ ಇದ್ದ ವರ್ಣವು ಬಿಟ್ಟು ಹೋಗುವುದು ಇಲ್ಲವೆ ಹೊಸದೊಂದು ವರ್ಣವು ನಡುವೆ ಬಂದು, ಆಗಮ ಅಥವಾ ಆದೇಶಗಳಾಗುವುದು. ಈ ಮೊದಲಾದ ವ್ಯತ್ಯಾಸಗಳಿಗೆ ಸಂಧಿ ಕಾರ್ಯಗಳೆಂದೂ ಹೆಸರು.

ಒಂದು ಪದಕ್ಕೆ ಮತ್ತೊಂದು ಪದವು ಸೇರುವಾಗ ಮಾತ್ರವೇ ಸಂಧಿಕಾರ್ಯವು ನಡೆಯುವುದಿಲ್ಲ. ಪ್ರಕೃತಿಗೆ ಪ್ರತ್ಯಯವು ಸೇರುವಾಗಲೂ ಅದು ನಡೆಯುತ್ತದೆ.

ಉದಾ: ಪ್ರಕೃತಿ + ಪ್ರತ್ಯಯ

ಗಾಣ + ಇಗ = ಗಾಣಿಗ

ಆಡು + ಇಸು = ಆಡಿಸು

ಇವೆರಡೂ ಉದಾಹರಣೆಗಳಲ್ಲಿಯೂ ಪ್ರಕೃತಿಯ ಕೊನೆ ಸ್ವರ ಬಿಟ್ಟು ಹೋಗಿದೆ.

ಮನೆ + ಇಂದ = ಮನೆಯಿಂದ

ಹಸು + ಇನ = ಹಸುವಿನ

ಎರಡು ಉದಾಹರಣೆಗಳಲ್ಲಿಯೂ ಪ್ರಕೃತಿಗೂ ಪ್ರತ್ಯಯಕ್ಕೂ ನಡುವೆ ಕ್ರಮವಾಗಿ 'ಯ'ಕಾರ 'ವ'ಕಾರಗಳು ಆಗಮವಾಗಿ ಬಂದು ಸೇರಿವೆ.

ಈ ಮೇಲೆ ನೋಡಿದಂತೆ ವಾಕ್ಯದ ಪದಗಳನ್ನು ಪ್ರಕೃತಿ ಪ್ರತ್ಯಯಗಳನ್ನೂ ನಾವು ಕೂಡಿಸಿಯೇ ಉಚ್ಚರಿಸಿದರೂ, ಸಂಧಿ ಕಾರ್ಯಗಳು ನಡೆಯುವುದು ಕೆಲವಡೆಗಳಲ್ಲಿ ಮಾತ್ರ, ಇವುಗಳು ಯಾವುವು ಎಂಬುದನ್ನು ಎಲ್ಲಿ? ಹೇಗೆ? ಯಾವ ರೀತಿಯಾಗಿ ನಡೆಯುತ್ತವೆ ಎಂಬುದನ್ನು ಎಲ್ಲಾ ಸಂಧಿಗಳ ಪ್ರಕಾರಗಳನ್ನು ಮುಂದಿನಂತೆ ನೋಡಲಾಗಿದೆ.

**ಸಂಧಿಗಳು**

**ಸಂಧಿಗಳ ವರ್ಗೀಕರಣ**



ಈ ಹಿಂದೆ ನಮೂದಿಸಿರುವ 'ಸಂಧಿಗಳ ವರ್ಗೀಕರಣ'ದಲ್ಲಿ ವಿಭಾಗಿಸಿದ ಸಂಧಿಗಳನ್ನು ಅರ್ಥ ವಿವರಣೆಗಳನ್ನೊಳಗೊಂಡಂತೆ ಉದಾಹರಣೆ ಸಮೇತವಾಗಿ ಒಂದೊಂದಾಗಿ ವಿಶ್ಲೇಷಣೆಯನ್ನು ಮಾಡಲಾಗಿದೆ.

**ಕನ್ನಡ ಸಂಧಿಗಳು**

ಕನ್ನಡ ಸಂಧಿ ಎಂದರೆ ಕನ್ನಡದ ಪ್ರಕೃತಿ ಅಥವಾ ಪ್ರತ್ಯಯಕ್ಕೆ ಕನ್ನಡದ್ದೇ ಆದ ಪ್ರಕೃತಿ ಅಥವಾ ಪ್ರತ್ಯಯ ಕೂಡಿಯಾಗುವ ಸಂಧಿಗೆ ಕನ್ನಡ ಸಂಧಿ ಎಂದು ಕರೆಯುತ್ತೇವೆ. ಕನ್ನಡ ಸಂಧಿಗಳಲ್ಲಿ ಮುಖ್ಯವಾಗಿ ಮತ್ತೆ ಎರಡು ಪ್ರಕಾರಗಳಾಗಿ ವಿಂಗಡಿಸಲಾಗಿದೆ.

**i) ಸ್ವರಸಂಧಿಗಳು** : ಸ್ವರಸಂಧಿಗಳೆಂದರೆ ಸ್ವರಕ್ಕೆ ಸ್ವರ ಪರವಾದರೆ ಅದಕ್ಕೆ ಸ್ವರಸಂಧಿ ಎಂದು ಕರೆಯುತ್ತೇವೆ.

ಉದಾ: ಸ್ವರ + ಸ್ವರ.

ಕನ್ನಡದ ಸ್ವರಸಂಧಿಗಳಲ್ಲಿ ಮತ್ತೆ ಎರಡು ಪ್ರಕಾರಗಳನ್ನಾಗಿ ವಿಭಾಗಿಸಲಾಗಿದೆ. ಅವುಗಳೆಂದರೆ

೧. ಲೋಪಸಂಧಿ, ೨. ಆಗಮಸಂಧಿ ಈ ಎರಡು ಪ್ರಕಾರದ ಸಂಧಿಗಳನ್ನು ಒಂದೊಂದಾಗಿ ಉದಾಹರಣೆ ಸಹಿತ ವಿವರಿಸಲಾಗಿದೆ.

**೧. ಲೋಪಸಂಧಿ:** ಸ್ವರದ ಮುಂದೆ ಸ್ವರವು ಪರವಾಗಿ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟುಹೋಗುತ್ತದೆ. ಹೀಗೆ ವರ್ಣವು ಬಿಟ್ಟುಹೋಗುವುದಕ್ಕೆ ಲೋಪವೆಂದೂ, ಈ ಸಂಧಿಗೆ ಲೋಪಸಂಧಿ ಎಂದು ಹೆಸರು.

ಅಥವಾ ಎರಡು ಸ್ವರಗಳು ಸೇರುವಾಗ ಪೂರ್ವಪದದ ಕೊನೆಯ ಅಕ್ಷರ ಕಾಣದೇ ಉತ್ತರಪದದ ಮೊದಲ ಸ್ವರಕ್ಕೆ ಪ್ರಾಧಾನ್ಯತೆ ಇದ್ದರೆ ಅದನ್ನು 'ಲೋಪಸಂಧಿ' ಎನ್ನುವರು.

ಉದಾ:

| | |
|---|---|
| ಪೂರ್ವಪದ + ಉತ್ತರದಪ = ಸಂಧಿಪದ – | ಬದಲಾವಣೆ |
| ಅಲ್ಲಿ + ಅಲ್ಲಲ್ಲಿ = ಅಲ್ಲಲ್ಲಿ | – 'ಇ'ಕಾರ ಲೋಪ |
| ನೂರು + ಆರು = ನೂರಾರು – | 'ಉ'ಕಾರ ಲೋಪ |
| ನಾವು + ಎಲ್ಲ = ನಾವೆಲ್ಲ – | 'ಉ'ಕಾರ ಲೋಪ |
| ಬೇರೆ + ಒಂದು = ಬೇರೊಂದು – | 'ಎ'ಕಾರ ಲೋಪ |
| ಬೇರೆ + ಒಬ್ಬ = ಬೇರೊಬ್ಬ – | 'ಎ'ಕಾರ ಲೋಪ |

ಊರು + ಅನ್ನು = ಊರನ್ನು – 'ಉ'ಕಾರ ಲೋಪ

ಹೊದೆ + ಇಕೆ = ಹೊದಿಕೆ – 'ಎ'ಕಾರ ಲೋಪ

ಇದು + ಇದು = ಇದಿದು – 'ಇ'ಕಾರ ಲೋಪ

ಈ ಮೊದಲು ಗಮನಿಸಲಾದ ಎಲ್ಲಾ ಉದಾಹರಣೆಗಳಲ್ಲಿ ಸಾಮಾನ್ಯವಾಗಿ ಉತ್ತರಪದದ ಕೊನೆಯ ಸ್ವರವು ಕಾಣೆಯಾಗಿರುವುದನ್ನು ಕಾಣುತ್ತೇವೆ. ಅವುಗಳಿಗೆ 'ಇ'ಕಾರ ಲೋಪ, 'ಉ'ಕಾರ ಲೋಪ, 'ಎ'ಕಾರ ಲೋಪ ಸಂಧಿಗಳೆಂದು ಕರೆಯುತ್ತೇವೆ.

ಈ ಪ್ರಕಾರವಾಗಿ ಕನ್ನಡದ ಲೋಪಸಂಧಿಯು ತನ್ನ ಸ್ವರೂಪವನ್ನು ಪಡೆದುಕೊಂಡಿದೆ.

**೨. ಆಗಮಸಂಧಿ:** ಸಂಧಿಮಾಡುವಾಗ ಸ್ವರದ ಮುಂದೆ ಸ್ವರವು ಬಂದು ಲೋಪಸಂಧಿ ಮಾಡಿದರೆ ಅರ್ಥವು ಕೆಡುವಂತಿದ್ದಲ್ಲಿ ಆ ಎರಡೂ ಸ್ವರಗಳ ಮಧ್ಯದಲ್ಲಿ 'ಯ'ಕಾರವೋ ಅಥವಾ 'ವ'ಕಾರವನ್ನೋ ಸೇರಿಸಿ ಹೇಳುತ್ತೇವೆ. 'ಯ'ಕಾರ ಬಂದರೆ 'ಯ'ಕಾರಾಗಮಸಂಧಿ ಎಂದು 'ವ'ಕಾರ ಬಂದರೆ 'ವ'ಕಾರಾಗಮಸಂಧಿ ಎನ್ನುತ್ತೇವೆ. ಅಥವಾ ಸ್ವರದ ಮುಂದೆ ಸ್ವರವು ಬಂದು ಸಂಧಿಯಾದಾಗ ಪೂರ್ವಪದ ಮತ್ತು ಉತ್ತರ ಪದಗಳೆರಡರಲ್ಲಿಯೂ ಎಲ್ಲ ಅಕ್ಷರಗಳು ಸಂಧಿಪದದಲ್ಲಿ ಇರುವವಲ್ಲದೆ ಹೊಸದಾಗಿ ಯ್, ವ್, ಲ್ ವ್ಯಂಜನಗಳು ಆಗಮವಾಗಿ ಸೇರುತ್ತವೆ. ಇದನ್ನೇ ನಾವು 'ಆಗಮಸಂಧಿ' ಎಂದು ಕರೆಯುತ್ತೇವೆ.

ಉದಾಹರಣೆಗೆ:

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಮನೆ + ಅನ್ನು = ಮನೆಯನ್ನು – 'ಯ'ಕಾರಾಗಮ

ಕೆರೆ + ಅಲ್ಲಿ = ಕೆರೆಯಲ್ಲಿ – 'ಯ'ಕಾರಾಗಮ

ಕವಿ + ಯಿಂದ = ಕವಿಯಿಂದ – 'ಯ'ಕಾರಾಗಮ

ಮೈ + ಅನ್ನು = ಮೈಯನ್ನು – 'ಯ'ಕಾರಾಗಮ

ಮಳೆ + ಇಂದ = ಮಳೆಯಿಂದ – 'ಯ'ಕಾರಾಗಮ

ಮೇ + ಇಸು = ಮೇಯಿಸು – 'ಯ'ಕಾರಾಗಮ

ಹಸು + ಅನ್ನು = ಹಸುವನ್ನು – 'ವ'ಕಾರಾಗಮ

ಗುರು + ಇಗೆ = ಗುರುವಿಗೆ – 'ವ'ಕಾರಾಗಮ

ಹೂ + ಇಂದ = ಹೂವಿಂದ – 'ವ'ಕಾರಾಗಮ

ಆ + ಓಲೆ = ಆವೋಲೆ – 'ವ'ಕಾರಾಗಮ

ಕರು + ಅನ್ನು = ಕರುವನ್ನು – 'ವ'ಕಾರಾಗಮ

ಅದರಿಂದ + ಏ = ಅಂದರಿಂದಲೇ – 'ಲ'ಕಾರಾಗಮ

ನೋಡುತ್ತ + ಊ = ನೋಡುತ್ತಲೂ – 'ಲ'ಕಾರಾಗಮ

ಈ ಪ್ರಕಾರವಾಗಿ ಆಗಮ ಸಂಧಿಗಳಲ್ಲಿ 'ಯ'ಕಾರ, 'ವ'ಕಾರ ಮತ್ತು 'ಲ'ಕಾರಗಳ ಕ್ರಮವಾಗಿ ಪರಸ್ಪರ ಆಗಮಗಳಾಗಿ ಬರುವುದನ್ನೇ ಇಲ್ಲಿ ಆಗಮಸಂಧಿ ಎಂದು ಕರೆಯಲು ಸಾಧ್ಯವಾಗುತ್ತದೆ.

ಕನ್ನಡ ಸ್ವರಸಂಧಿಗಳನ್ನು ಪ್ರಮುಖವಾಗಿ ಲೋಪ ಮತ್ತು ಆಗಮ ಸಂಧಿಗಳೆಂದು ಎರಡು ಪ್ರಕಾರವಾಗಿ ವರ್ಗೀಕರಿಸಿದ್ದಾರೆ.

**ii) ವ್ಯಂಜನ ಸಂಧಿಗಳು:** ಸ್ವರಸಂಧಿಗಳಲ್ಲಿ ಸ್ವರಕ್ಕೆ ಸ್ವರ ಪರವಾದರೆ ಅದಕ್ಕೆ ಸ್ವರ ಸಂಧಿಗಳೆಂದು ಕರೆಯುತ್ತಾರೆ. ಆದರೆ ಇಲ್ಲಿ ಹೆಸರೇ ಸೂಚಿಸುವಂತೆ ಸ್ವರದ ಪರವಾಗಿ (ಎದುರಿಗೆ) ವ್ಯಂಜನವು ಬಂದರೆ ಅವಕ್ಕೆ ವ್ಯಂಜನಸಂಧಿಗಳೆಂದು ಹೆಸರು.

**೧. ಆದೇಶಸಂಧಿ:** ಪೂರ್ವೋತ್ತರ ಪದಗಳನ್ನು ಕೂಡಿಸಿ ಸಂಧಿ ಮಾಡುವಾಗ ಉತ್ತರ ಪದದ ಆದಿಯಲ್ಲಿಯ ಕ್, ತ್, ಪ್, ವ್ಯಂಜನಗಳಿಗೆ ಕ್ರಮವಾಗಿ ವರ್ಗದ ಮೂರನೇ ಅಕ್ಷರಗಳಾದ ಗ್, ದ್, ಬ್, ವ್ಯಂಜನಗಳು ನಿಯತವಾಗಿ ಬರುವುದಕ್ಕೆ ಆದೇಶಸಂಧಿ ಎಂದು ಕರೆಯುತ್ತಾರೆ. ಅಂದರೆ ವರ್ಗದ ಪ್ರಥಮ ವ್ಯಂಜನಗಳಿಗೆ ವರ್ಗದ ತೃತೀಯ ವ್ಯಂಜನಗಳು ಕ್ರಮವಾಗಿ ಆದೇಶವಾಗಿ ಬರುವುದಕ್ಕೆ ಆದೇಶಸಂಧಿ ಎಂದು ಕರೆಯುತ್ತೇವೆ.

ಉದಾಹರಣೆಗೆ:

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಹಳೆ + ಕನ್ನಡ = ಹಳೆಗನ್ನಡ – 'ಕ್' ಸ್ಥಳದಲ್ಲಿ 'ಗ್' ಆದೇಶವಾಗಿದೆ.

ಬಂಡೆ + ಕಲ್ಲು = ಬಂಡೆಗಲ್ಲು – 'ಕ್' ಸ್ಥಳದಲ್ಲಿ 'ಗ್' ಆದೇಶವಾಗಿದೆ.

ಮಳೆ + ಕಾಲ = ಮಳೆಗಾಲ – 'ಕ್' ಸ್ಥಳದಲ್ಲಿ 'ಗ್' ಆದೇಶವಾಗಿದೆ.

ಹುಲ್ಲು + ಕಾವಲು = ಹುಲ್ಲುಗಾವಲು – 'ಕ್' ಸ್ಥಳದಲ್ಲಿ 'ಗ್' ಆದೇಶವಾಗಿದೆ.

ಕಡಲು + ಕಾಲುವೆ = ಕಡಲ್ಗಾಲುವೆ – 'ಕ್' ಸ್ಥಳದಲ್ಲಿ 'ಗ್' ಆದೇಶವಾಗಿದೆ.

ಬೆಟ್ಟ + ತಾವರೆ = ಬೆಟ್ಟದಾವರೆ – 'ತ್' ಸ್ಥಳದಲ್ಲಿ 'ದ್' ಆದೇಶವಾಗಿದೆ.

ಹುಲಿ + ತೊಗಲು = ಬೆಟ್ಟದೊಗಲು – 'ತ್' ಸ್ಥಳದಲ್ಲಿ 'ದ್' ಆದೇಶವಾಗಿದೆ.

ಹೂ + ತೋಟ = ಹೂದೋಟ – 'ತ್' ಸ್ಥಳದಲ್ಲಿ 'ದ್' ಆದೇಶವಾಗಿದೆ.

ಕಣ್ + ಪನಿ = ಕಂಬನಿ – 'ಪ್' ಸ್ಥಳದಲ್ಲಿ 'ಬ್' ಆದೇಶವಾಗಿದೆ.

ತಣ್ + ಪುಪಿತ = ತಣ್ಬುಪಿತ – 'ಪ್' ಸ್ಥಳದಲ್ಲಿ 'ಬ್' ಆದೇಶವಾಗಿದೆ.

ಈ ರೀತಿಯಾಗಿ ಆದೇಶ ಸಂಧಿಯಲ್ಲಿ ಕ್, ತ್, ಪ್, ಗಳಿಗೆ ಕ್ರಮವಾಗಿ ಗ್, ದ್, ಬ್, ಗಳನ್ನು ನಿಯತವಾಗಿ ಬರುವ ವಿಧಾನಕ್ಕೆ 'ಗದಬಾಧೇಶ ಸಂಧಿ' ಎಂತಲೂ ಕರೆದಿದ್ದಾರೆ

ಇತ್ತೀಚಿನ ದಿನಗಳಲ್ಲಿ ಆಧುನಿಕ ವ್ಯಾಕರಣಕಾರರು ಶಾಲಾ–ಕಾಲೇಜುಗಳಲ್ಲಿ ಅಭ್ಯಾಸದ ಅನುಕೂಲಕ್ಕಾಗಿ ಆದೇಶ ಸಂಧಿಯಲ್ಲೆ ವಕಾರಾದೇಶ ಸಂಧಿಯನ್ನು ವಿಭಾಗಿಸಿದ್ದಾರೆ.

**೨. ವಕಾರಾದೇಶ ಸಂಧಿ:** ಸಮಾಸದಲ್ಲಿ ಉತ್ತರ ಪದ ಆದಿಯಲ್ಲಿರುವ ಪ, ಬ, ಮ, ಮೂರು ವ್ಯಂಜನಗಳಿಗೆ 'ವ್' ವ್ಯಂಜನ ಆದೇಶವಾಗುವುದು. ಇದು ವಕಾರಾದೇಶಸಂಧಿ ಎನ್ನುತ್ತೇವೆ.

ಉದಾಹರಣೆಗೆ:

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಕೆನೆ + ಪಾಲು = ಕೆನೆವಾಲು – 'ಪ್' ಸ್ಥಳದಲ್ಲಿ 'ವ' ಆದೇಶ

ತಲೆ + ಬಾಗು = ತಲೆವಾಗು – 'ಬ್' ಸ್ಥಳದಲ್ಲಿ 'ವ' ಆದೇಶ

ಎಲೆ + ಮನೆ = ಎಲೆವನೆ – 'ಮ್' ಸ್ಥಳದಲ್ಲಿ 'ವ' ಆದೇಶ

ಈ ತೆರನಾಗಿ ವಕಾರದೇಶವು ಕನ್ನಡ ಸಂದರ್ಭದಲ್ಲಿ ನಡೆಯುತ್ತದೆ ಎಂದು ಆಧುನಿಕರ ನಿಲುವು. ಚ, ಜ, ಛಕಾರಾದೇಶಸಂಧಿ, ಸಮಾಸದಲ್ಲಿ ಉತ್ತರಪದ ಆದಿಯಲ್ಲಿರುವ 'ಸ'ಕಾರಕ್ಕೆ ಕೆಲವು ಕಡೆ 'ಚ'ಕಾರವೂ, ಕೆಲವು ಕಡೆ 'ಜ'ಕಾರವೂ ಕೆಲವು ಕಡೆ ಸಂಖ್ಯೆ ಇದ್ದರೆ 'ಛ' ಕಾರವೂ ಆದೇಶವಾಗುವುದು. ಆದ್ದರಿಂದ ಚ, ಜ, ಛ,ಕಾರದೇಶ ಸಂಧಿ ಎಂದು ಕರೆಯುತ್ತಾರೆ.

ಉದಾಹರಣೆಗೆ:

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಇನ್ + ಸರ = ಇಂಚರ – 'ಸ'ಕಾರಕ್ಕೆ ಚಕಾರಾದೇಶ

ಮುನ್ + ಸೆರಗು = ಮುಂಜೆರಗು – 'ಸ'ಕಾರಕ್ಕೆ ಜಕಾರಾದೇಶ

ಇರ್ + ಸಾಸಿರ = ಇರ್ಛಾಸಿರ – 'ಸ'ಕಾರಕ್ಕೆ ಛಕಾರಾದೇಶ

ನುಣ್ಚರ, ಮುಂಜೋಡರ, ತಣ್ಜೊಡರ್, ಮುಂಜೂರ್, ಪೊಂಜುರಿಗೆ, ಕಣ್ಮೋಲ್, ನೂರ್ವಾಸಿರ, ಪದಿನೆಣ್ಛಾಸಿಕ ಮುಂತಾದವುಗಳು ಈ ಮಾದರಿಯಲ್ಲಿ ಬಳಕೆಯಾಗಿವೆ.

**ಸಂಸ್ಕೃತ ಸಂಧಿಗಳು**

ಪೂರ್ವಪದ ಮತ್ತು ಉತ್ತರ ಪದಗಳೆರಡೂ ಸಂಸ್ಕೃತ ಪದಗಳಾಗಿದ್ದರೆ ಅಂತಹ ಸಂಧಿಗೆ ಸಂಸ್ಕೃತ ಸಂಧಿಯೆಂದು ಕರೆಯುತ್ತಾರೆ ಅಥವಾ ಸಂಧಿಕಾರ್ಯಕ್ಕೆ ಒಳಗಾಗುವ ಪೂರ್ವೋತ್ತರ ಪದಗಳೆರಡೂ ಕನ್ನಡ. ಸಂಸ್ಕೃತ ಅಥವಾ ಸಂಸ್ಕೃತ-ಕನ್ನಡ ಪದಗಳು ಸೇರಿದರೂ ಸಂಸ್ಕೃತ ಸಂಧಿಗಳ ಪಟ್ಟಿಯಲ್ಲಿ ಸೇರಿಕೊಳ್ಳುತ್ತೇವೆ.

ಉದಾ: ಕನ್ನಡ + ಸಂಸ್ಕೃತ

ಸಂಸ್ಕೃತ + ಕನ್ನಡ

ಸಂಸ್ಕೃತ + ಸಂಸ್ಕೃತ ಈ ಪ್ರಕಾರದ ಪದಗಳು ಸಂಸ್ಕೃತ ಸಂಧಿಯ ನಿಯಮಕ್ಕೆ ಒಳಪಡುತ್ತವೆ. ಕಾರಣ ಕನ್ನಡ ಭಾಷೆಯಲ್ಲಿ ಬಹಳಷ್ಟು ಪದಗಳು ಸಂಸ್ಕೃತ ಪದಗಳಾಗಿವೆ ಹಾಗೂ ಕನ್ನಡ ಭಾಷೆಯು ಸಂಸ್ಕೃತ ಭಾಷೆಯಿಂದ ಅನೇಕ ಪದಗಳನ್ನು ಎರವಲಾಗಿ ಪಡೆದು ಅಥವಾ ಸ್ವೀಕರಿಸಿ ತನ್ನ ಪ್ರೌಢಿಮೆಯಲ್ಲಿ ಇರುವ ಕಾರಣ ಕನ್ನಡ ಸಂಧಿಗಳಲ್ಲಿ ಸಂಸ್ಕೃತ ಸಂಧಿಗಳ ಕಲಿಕೆ ಅಗತ್ಯವಾಗಿ ಮಾಡಬೇಕಾಗುತ್ತದೆ.

i) **ಸಂಸ್ಕೃತ ಸ್ವರ ಸಂಧಿಗಳು:** ಸ್ವರಕ್ಕೆ ಸ್ವರ ಸೇರಿ ಆಗುವ ಸಂಧಿ ವಿಧಾನಕ್ಕೆ ಸ್ವರಸಂಧಿಗಳೆಂದು ಹೆಸರಿಸಲಾಗಿದೆ.

ಸ್ವರ ಸಂಧಿಗಳಲ್ಲಿ ಪ್ರಮುಖವಾಗಿ ಸವರ್ಣದೀರ್ಘಸಂಧಿ, ಗುಣಸಂಧಿ, ವೃದ್ಧಿಸಂಧಿ, ಯಣ್‌ಸಂಧಿ ಎಂಬುದಾಗಿ ನಾಲ್ಕು ಪ್ರಕಾರಗಳನ್ನಾಗಿ ಸಂಸ್ಕೃತದ ಸ್ವರಸಂಧಿಗಳನ್ನು ವಿಭಾಗಿಸಲಾಗಿದೆ. ಈ ನಾಲ್ಕು ಪ್ರಕಾರಗಳನ್ನು ಅರ್ಥ ವಿವರ ಸಹಿತವಾಗಿ ಉದಾಹರಣೆಗಳೊಂದಿಗೆ ಈ ಮುಂದಿನಂತೆ ವಿವೇಚಿಸಲಾಗಿದೆ.

೧. **ಸವರ್ಣದೀರ್ಘ ಸಂಧಿ:** ಸವರ್ಣ ಎಂದರೆ ಒಂದೇ ಜಾತಿಯ ಅಥವಾ ಸಮಾನ ಜಾತಿಯ ವರ್ಣಗಳು ಪರವಾದಾಗ ಅದೇ ವರ್ಣದ ದೀರ್ಘ ಅಕ್ಷರವು ಆದೇಶವಾಗಿ ಬರುವುದಕ್ಕೆ ಸವರ್ಣದೀರ್ಘಸಂಧಿ ಎನ್ನುವರು.

ಸವರ್ಣಗಳಿಗೆ ಸವರ್ಣಗಳು ಪರವಾಗಿ ಪರಸ್ಪರ ಅವೆರಡರ ಸ್ಥಾನದಲ್ಲಿ ಅದೇ ವರ್ಣದ ಸ್ವರವು ದೀರ್ಘವಾಗಿ ಬರುವುದಕ್ಕೆ ಸವರ್ಣದೀರ್ಘ ಸಂಧಿ ಎನ್ನುವರು.

ಸವರ್ಣ ಸ್ವರಗಳೆಂದರೆ, ಅ, ಆ, ಇ, ಈ, ಉ, ಊ ಇವುಗಳಾಗಿವೆ. ಸವರ್ಣದೀರ್ಘ ಸಂಧಿಯ ನಿಯಮದ ಸಾರಾಂಶಸೂಚಿ ಈ ಕೆಳಗಿನಂತಿದೆ.

ಅ/ಆ + ಅ/ಆ = ಆ

ಇ/ಈ + ಇ/ಈ = ಈ

ಉ/ಊ + ಉ/ಊ = ಊ

'ಅ' ಅಥವಾ 'ಆ' ಸ್ವರಕ್ಕೆ, 'ಅ' ಅಥವಾ 'ಆ' ಸ್ವರಪರವಾದರೆ 'ಆ' ದೀರ್ಘಾಕ್ಷರವು ಆದೇಶವಾಗುತ್ತದೆ. ಅದೇ ತೆರನಾಗಿ 'ಇ' ಅಥವಾ 'ಈ' ಸ್ವರಕ್ಕೆ 'ಇ' ಅಥವಾ 'ಈ' ಸ್ವರವು ಪರವಾದರೆ ಅವೆರಡರ ಸ್ಥಾನದಲ್ಲಿ 'ಈ' ಕಾರವು ಬರುತ್ತದೆ. ಅಥವಾ 'ಉ' ಅಥವಾ 'ಊ' ಸ್ವರಕ್ಕೆ 'ಉ' ಅಥವಾ 'ಊ' ಸ್ವರವು ಪರವಾದರೆ ಅವೆರಡರ ಸ್ಥಾನದಲ್ಲಿ 'ಊ' ಕಾರವು ಬರುವುದೆಂಬುದನ್ನು ಈ ಮೇಲಿನ ಸಾರಾಂಶ ಸೂತ್ರದಿಂದ ತಿಳಿದುಬರುತ್ತದೆ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಅ/ಆ + ಅ/ಆ = ಆ

ವಿದ್ಯ + ಅರ್ಥಿ = ವಿದ್ಯಾರ್ಥಿ – ದ್ಯ > ದ್ಯಾ ದೀರ್ಘವಾಗಿದೆ.

ಸಂಗೀತ + ಅಭ್ಯಾಸ = ಸಂಗೀತಾಭ್ಯಾಸ – ತ > ತಾ ದೀರ್ಘವಾಗಿದೆ.

ಅಕ್ಷರ + ಅಭ್ಯಾಸ = ಅಕ್ಷರಾಭ್ಯಾಸ – ರ > ರಾ ದೀರ್ಘವಾಗಿದೆ.

ಪಟ್ಟ + ಅಧಿಕಾರ = ಪಟ್ಟಾಧಿಕಾರ – ಟ > ಟಾ ದೀರ್ಘವಾಗಿದೆ.

ಧರ್ಮ + ಅಪರಾಧ = ಧರ್ಮಾಪರಾಧ – ರ್ಮ > ರ್ಮಾ ದೀರ್ಘವಾಗಿದೆ.

ದೇವ + ಆಲಯ = ದೇವಾಲಯ – ವ > ವಾ ದೀರ್ಘವಾಗಿದೆ.

ಸುರ + ಅಸುರ = ಸುರಾಸುರ – ರ > ರಾ ದೀರ್ಘವಾಗಿದೆ.

ರೂಪ + ಅಂತರ = ರೂಪಾಂತರ – ಪ > ಪಾ ದೀರ್ಘವಾಗಿದೆ.

ಮಹಾ + ಆಕಾಂಕ್ಷೆ = ಮಹಾಕಾಂಕ್ಷೆ – ಹಾ > ಹಾ ದೀರ್ಘವಾಗಿದೆ.

ಆಟ + ಅಭಿಮಾನಿ = ಆಟಾಭಿಮಾನಿ – ಟ > ಟಾ ದೀರ್ಘವಾಗಿದೆ.

ಸೇವ + ಅವಕಾಶ = ಸೇವಾಕಾಶ – ವ > ವಾ ದೀರ್ಘವಾಗಿದೆ.

ಸ್ಮರಣಾ + ಅನುಭವ = ಸ್ಮರಣಾನುಭವ – ಣಾ > ಣಾ ದೀರ್ಘವಾಗಿದೆ.

ಸಾಹಸ + ಆಭರಣ = ಸಾಹಸಾಭರಣ – ಸ > ಸಾ ದೀರ್ಘವಾಗಿದೆ.

ಜೀವನ + ಅವಶ್ಯಕ = ಜೀವನಾಕಾವಶ್ಯಕ – ನ > ನಾ ದೀರ್ಘವಾಗಿದೆ.

ಈ ತೆರನಾಗಿ ಅ, ಆ, ಕಾರಗಳಿಗೆ ಅ, ಆ ಕಾರಗಳು ಎದುರಾಗಿ ಅವೆರಡರ ಸ್ಥಾನದಲ್ಲಿ ಅದೇ ಸವರ್ಣವು ದೀರ್ಘವಾಗಿರುವುದನ್ನು ಮೇಲಿನ ಎಲ್ಲಾ ಉದಾಹರಣೆಗಳಲ್ಲಿ

ಕಂಡುಕೊಂಡಿದ್ದೇವೆ. ಸವರ್ಣದೀರ್ಘ ಸಂಧಿಯಲ್ಲಿ ಇ ಅಥವಾ ಈ ಸ್ವರಗಳಿಗೆ ಇ ಅಥವಾ ಈ ಸ್ವರಗಳು ಎದುರಾದರೆ ಅವೆರಡರ ಸ್ಥಾನದಲ್ಲಿ ಸವರ್ಣ ಸ್ವರವಾದ ಈ ಸ್ವರವು ಕಡ್ಡಾಯವಾಗಿ ಬರುವುದಕ್ಕೆ ನಾವು ಸವರ್ಣದೀರ್ಘ ಎಂದು ಅವೆರಡೂ ಸವರ್ಣ ಅಕ್ಷರಗಳು ಸೇರುವುದಕ್ಕೆ ಸಂಧಿ ಎಂದು ಕರೆಯುತ್ತೇವೆ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಇ/ಈ + ಇ/ಈ = ಈ

ರವಿ + ಇಂದ್ರ = ರವೀಂದ್ರ – ವಿ > ವೀ ದೀರ್ಘವಾಗಿದೆ.

ಕವಿ + ಇಂದ್ರ = ಕವೀಂದ್ರ – ವಿ > ವೀ ದೀರ್ಘವಾಗಿದೆ.

ಮುನಿ + ಇಂದ್ರ = ಮುನೀಂದ್ರ – ವಿ > ವೀ ದೀರ್ಘವಾಗಿದೆ.

ಫಣಿ + ಇಂದ್ರ = ಫಣೀಂದ್ರ – ಣಿ > ಣೀ ದೀರ್ಘವಾಗಿದೆ.

ಲಕ್ಷ್ಮೀ + ಇಂದ್ರ = ಲಕ್ಷ್ಮೀಂದ್ರ – ಕ್ಷಿ > ಕ್ಷೀ ದೀರ್ಘವಾಗಿದೆ.

ಲಕ್ಷ್ಮೀ + ಈಶ = ಲಕ್ಷ್ಮೀಶ – ಕ್ಷಿ > ಕ್ಷೀ ದೀರ್ಘವಾಗಿದೆ.

ಗಿರಿ + ಈಶ = ಗಿರೀಶ – ರಿ > ರೀ ದೀರ್ಘವಾಗಿದೆ.

ಹರಿ + ಈಶ = ಹರೀಶ – ರಿ > ರೀ ದೀರ್ಘವಾಗಿದೆ.

ಕವಿ + ಈಶ್ವರ = ಕವೀಶ್ವರ – ವಿ > ವೀ ದೀರ್ಘವಾಗಿದೆ.

ಗೌರೀ + ಈಶ = ಗೌರೀಶ – ರಿ > ರೀ ದೀರ್ಘವಾಗಿದೆ.

ಉ ಅಥವಾ ಊ ಸ್ವರಗಳಿಗೆ ಉ ಅಥವಾ ಊ ಸ್ವರಗಳು ಎದುರಾದರೆ ಅವುಗಳ ಸ್ಥಾನದಲ್ಲಿ ಸವರ್ಣ ಸ್ವರವು ದೀರ್ಘವಾಗಿ ಬರುತ್ತವೆ. ಕಾರಣ ಸವರ್ಣದೀರ್ಘ ಸಂಧಿಯ ಹೆಸರಿಸಲ್ಪಡುತ್ತದೆ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಉ/ಊ + ಉ/ಊ = ಊ

ಗುರು + ಉಪದೇಶ = ಗುರೂಪದೇಶ – ರು > ರೂ ದೀರ್ಘವಾಗಿದೆ.

ಕಟು + ಉಕ್ತಿ = ಕಟೂಕ್ತಿ – ಟು > ಟೂ ದೀರ್ಘವಾಗಿದೆ.

ವಧು + ಉನ್ನತಿ = ವಧೂನ್ನತಿ – ಧು > ಧೂ ದೀರ್ಘವಾಗಿದೆ.

ಬಹು + ಊರ್ಜಿತ = ಬಹೂರ್ಜಿತ – ಹು > ಹೂ ದೀರ್ಘವಾಗಿದೆ.

ಹೆಚ್ಚಿನ ಉದಾಹರಣೆ:

ಶಿಕ್ಷಾರ್ಥಿ ಶಿಷ್ಯಾರ್ಥಿ ಸ್ಪರ್ಧಾರ್ಥಿ

| | | |
|---|---|---|
| ಲಕ್ಷಾರ್ಥಿ | ಜ್ಞಾನಾರ್ಥಿ | ಮೋಕ್ಷಾರ್ಥಿ |
| ಸೇವಾರ್ಥಿ | ಶಿಬಿರಾರ್ಥಿ | ಅಕ್ಷರಾರ್ಥಿ |
| ವಿದ್ಯಾಸಕ್ತ | ಭಾಷಾಸಕ್ತ | ಕಾವ್ಯಾಸಕ್ತ |
| ದೈವಾಸಕ್ತ | ಧರ್ಮಾಸಕ್ತ | ಅಕ್ಷರಾಸಕ್ತ |
| ಅಕ್ಷರಾಭ್ಯಾಸ | ವೇದಾಭ್ಯಾಸ | ಶಾಸ್ತ್ರಾಭ್ಯಾಸ |
| ಯುದ್ಧಾಭ್ಯಾಸ | ವಿದ್ಯಾಲಯ | ಧರ್ಮಾಲಯ |
| ಸೇವಾಲಯ | ದೇವಾಲಯ | ಶಿವಾಲಯ |
| ಪೂಜಾಲಯ | ಮಹಾಲಯ | ನೇತ್ರಾಲಯ |
| ಔಷಧಾಲಯ | ಗೃಹಾಲಯ | ಜ್ಞಾನಾಲಯ |
| ಪಾತಾಲಯ | ಭೋಜನಾಲಯ | ಗ್ರಂಥಾಲಯ |
| ಕರುಣಾನುಭಾವ | ಧಾರಣಾನುಭವ | ಸಂಗೀತಾನುಭವ |
| ಶಾಸ್ತ್ರಾನುಭವ | ಯುದ್ಧಾನುಭವ | ಕಾವ್ಯಾನುಭವ |
| ಧರ್ಮಾನುಭವ | ಸ್ಮರಣಾನುಭವ | ಸುರಾಸುರ |
| ದೇವಾಸುರ | ಬೊಮ್ಮಾಸುರ | ರೂಪಾಂತರ |
| ಧರ್ಮಾಂತರ | ಮತಾಂತರ | ಭಾವಾಂತರ |
| ಕಾಲಾಂತರ | ಗ್ರಾಮಾಂತರ | ಲಕ್ಷಾಂತರ |
| ಚಿನ್ನಾಭರಣ | ವಸ್ತ್ರಾಭರಣ | ಸಕಲಾಭರಣ |
| ಮಹಾತ್ಮ | ಧರ್ಮಾತ್ಮ | ಹುತಾತ್ಮ |
| ಪಾಪಾತ್ಮ | ಪುಣ್ಯಾತ್ಮ | ಮಹಾಕಾಂಕ್ಷೆ |
| ಅಕ್ಷರಾಕಾಂಕ್ಷೆ | ನೃತ್ಯಾಕಾಂಕ್ಷೆ | ಗಾಯನಾಕಾಂಕ್ಷೆ |
| ಶಾಲಾಕಾಂಕ್ಷೆ | ಆಟಾಭಿಮಾನಿ | ಕಲಾಭಿಮಾನಿ |
| ಶಿಕ್ಷಣಾಭಿಮಾನಿ | ನಾಟ್ಯಾಭಿಮಾನಿ | ಸಂಸ್ಕೃತಾಭಿಮಾನಿ |
| ಪಟ್ಟಾಧಿಕಾರಿ | ದಿಟ್ಟಾಧಿಕಾರಿ | ಸಮರಾಧಿಕಾರಿ |
| ಸೇವಾಧಿಕಾರ | ಶಕ್ತೀಂದ್ರ | ಋಣೀಂದ್ರ |
| ಗುಣೀಂದ್ರ | ದೇವೀಂದ್ರ | ಸ್ವಾಮೀಂದ್ರ |
| ಮತೀಶ | ಮಣೀಶ | ಪೃಥ್ವೀಶ |
| ವಧೂಪದೇಶ | ಪ್ರಭೂಪದೇಶ | ತನೂಪದೇಶ |

ವಸ್ತೂಪದೇಶ ವಿಷ್ಣೂಪದೇಶ ಸಾಧೂಪದೇಶ

ಸರ್ಪಾಸ್ತ್ರ ಧರ್ಮಾಸ್ತ್ರ ಯುದ್ಧಾಸ್ತ್ರ

ಇತ್ಯಾದಿ ಈ ಪ್ರಕಾರವಾಗಿ ಸವರ್ಣದೀರ್ಘಸಂಧಿ ತನ್ನ ಸ್ವರೂಪವನ್ನು ಪಡೆದುಕೊಂಡಿದೆ.

ಇದು ಸಂಸ್ಕೃತ ಸ್ವರ ಸಂಧಿಗಳ ಮೊದಲ ಪ್ರಕಾರವಾಗಿದೆ. ನಂತರ ಎರಡನೆಯದಾಗಿ ಗುಣಸಂಧಿಯನ್ನು ಗುರುತಿಸಬಹುದು.

**೨. ಗುಣಸಂಧಿ:** ಗುಣಸಂಧಿ ಕ್ರಿಯೆಯಲ್ಲಿ ಪೂರ್ವಪದದ ಕೊನೆಯ ಅ, ಆ, ಸ್ವರಗಳಿಗೆ ಉತ್ತರ ಪದದ ಆದಿಯಲ್ಲಿ ಬರುವ ಇ, ಈ ಸ್ವರಗಳು ಎದುರಾದರೆ ಅವುಗಳ ಬದಲಾಗಿ ಸಂಧಿಕಾರ್ಯದಲ್ಲಿ ಏ ಕಾರವು ಆದೇಶವಾಗಿ ಬರುತ್ತದೆ. ನಂತರದಲ್ಲಿ ಅ, ಆ ಕಾರಗಳಿಗೆ ಉ, ಊ, ಕಾರಗಳು ಉತ್ತರ ಪದಾದಿಯಲ್ಲಿ ಎದುರಾಗಿ ಬಂದರೆ ಅವುಗಳ ಸ್ಥಾನ ಓ ಕಾರವು ಆದೇಶವಾಗಿ ಬರುತ್ತದೆ.

ಹಾಗೂ ಅ, ಆ, ಕಾರಗಳಿಗೆ 'ಋ' ಕಾರವು ಪರವಾದರೆ ಅವುಗಳಿಗೆ ಆದೇಶವಾಗಿ, 'ಅರ್' ಕರವು ಆದೇಶವಾಗಿ ಬರುವುದಕ್ಕೆ ಗುಣಸಂಧಿ ಎಂದು ಹೆಸರಿಸಲಾಗಿದೆ.

| ಪೂರ್ವಪದ + ಉತ್ತರಪದ = ಸಂಧಿಪದ | – ಬದಲಾವಣೆ |
|---|---|
| ಅ, ಆ + ಇ, ಈ = ಏ | – ಇ, ಈ > ಏ ಎಂದಾಗಿದೆ. |
| ಅ, ಆ + ಉ, ಊ = ಓ | – ಉ, ಊ > ಓ ಎಂದಾಗಿದೆ. |
| ಅ, ಆ + ಋ = ಅರ್ | – ಋ > ಅರ್ ಆದೇಶವಾಗುತ್ತದೆ. |

ಈ ಮೇಲಿನ ಸಾರಾಂಶ ಸೂತ್ರಗಳನ್ನು ಉದಾಹರಣೆ ಸಮೇತವಾಗಿ ಒಂದೊಂದಾಗಿ ವಿವರಿಸಲಾಗಿದೆ.

**ಅ)** ಅ, ಆ, ಕಾರಗಳಿಗೆ ಉತ್ತರ ಪದದ ಆದಿಯಲ್ಲಿ ಇ, ಈ, ಕಾರಗಳು ಪರವಾದರೆ ಸಂಧಿಕಾರ್ಯ ನಡೆದು, ಎರಡೂ ಅಕ್ಷರಗಳ ಸ್ಥಾನದಲ್ಲಿ 'ಏ' ಕಾರವು ಆದೇಶವಾಗುವುದು ಒಂದು ವಿಧಾನವಾಗಿದೆ.

| ಪೂರ್ವಪದ | + ಉತ್ತರಪದ | = ಸಂಧಿಪದ | – ಬದಲಾವಣೆ |
|---|---|---|---|
| ಅ, ಆ | + ಇ, ಈ | = ಏ | – ಏ ಕಾರ ಆದೇಶವಾಗುತ್ತದೆ. |
| ದೇವ | + ಈಶ | = ದೇವೇಶ | – ಈ > ವೇ ಆದೇಶವಾಗಿದೆ. |
| ಗಣ | + ಈಶ | = ಗಣೇಶ | – ಈ > ಣೇ ಆದೇಶವಾಗಿದೆ. |
| ಸರ್ವ | + ಈಶ | = ಸರ್ವೇಶ | – ಈ > ರ್ವೇ ಆದೇಶವಾಗಿದೆ. |
| ಮಹಾ | + ಈಶ್ವರ | = ಮಹೇಶ್ವರ | – ಈ > ಹೇ ಆದೇಶವಾಗಿದೆ. |

ನರ + ಇಂದ್ರ = ನರೇಂದ್ರ – ಇ > ರೇ ಆದೇಶವಾಗಿದೆ.

ಸುರ + ಇಂದ್ರ = ಸುರೇಂದ್ರ – ಇ > ರೇ ಆದೇಶವಾಗಿದೆ.

ಧರಾ + ಇಂದ್ರ = ಧರೇಂದ್ರ – ಇ > ರೇ ಆದೇಶವಾಗಿದೆ.

ಲೋಕ + ಈಶ = ಲೋಕೇಶ – ಈ > ಕೇ ಆದೇಶವಾಗಿದೆ.

ಬ) ಅ, ಆ + ಉ, ಊ = ಓ, ಪೂರ್ವಪದದ ಕೊನೆಯ ಸ್ವರಗಳಾದ ಅ, ಆ, ಕಾರಗಳಿಗೆ ಉ, ಊ, ಕಾರಗಳು ಉತ್ತರಾಧಿಯಾಗಿ ಬಂದು ಅವೆರಡರ ಸ್ಥಾನದಲ್ಲಿ ಸಂಧಿಕಾರ್ಯ ನಡೆದಾಗ 'ಓ' ಕಾರವು ಆದೇಶವಾಗಿ ಬರುವುದಕ್ಕೆ ಉದಾಹರಣೆಗಳನ್ನು ನೋಡಬಹುದಾಗಿದೆ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಅ, ಆ + ಉ, ಊ = ಓ – ಓ ಕಾರ ಆದೇಶವಾಗುತ್ತದೆ.

ಸೂರ್ಯ + ಉದಯ = ಸೂರ್ಯೋದಯ – ಉ > ರ್ಯೋ ಆದೇಶವಾಗಿದೆ.

ನವ + ಉದಯ = ನವೋದಯ – ಉ > ವೋ ಆದೇಶವಾಗಿದೆ.

ಜ್ಞಾನ + ಉದಯ = ಜ್ಞಾನೋದಯ – ಉ > ನೋ ಆದೇಶವಾಗಿದೆ.

ಕಲಾ + ಉಪಾಸಕ = ಕಲೋಪಾಸಕ – ಉ > ಲೋ ಆದೇಶವಾಗಿದೆ.

ಸಮಯ + ಉಚಿತ = ಸಮಯೋಚಿತ – ಉ > ಯೋ ಆದೇಶವಾಗಿದೆ.

ರಾಜ್ಯ + ಉತ್ಸವ = ರಾಜ್ಯೋತ್ಸವ – ಉ > ಜ್ಯೋ ಆದೇಶವಾಗಿದೆ.

ದಕ್ಷಿಣ + ಉತ್ತರ = ದಕ್ಷಿಣೋತ್ತರ – ಉ > ಣೋ ಆದೇಶವಾಗಿದೆ.

ಸೀಮೆ + ಉಲ್ಲಂಘನೆ = ಸೀಮೋಲ್ಲಂಘನೆ – ಉ > ಮೋ ಆದೇಶವಾಗಿದೆ.

ಸಹ + ಉದ್ಯೋಗಿ = ಸಹೋದ್ಯೋಗಿ – ಉ > ದ್ಯೋ ಆದೇಶವಾಗಿದೆ.

ಪುರಾಣ + ಉಕ್ತ = ಪುರಾಣೋಕ್ತ – ಉ > ಣೋ ಆದೇಶವಾಗಿದೆ.

ಕುಟಿಲ + ಉಪಾಯ = ಕುಟಿಲೋಪಾಯ – ಉ > ಲೋ ಆದೇಶವಾಗಿದೆ.

ಯುದ್ಧ + ಉಪಕರಣ = ಯುದ್ಧೋಪಕರಣ– ಉ > ದ್ಧೋ ಆದೇಶವಾಗಿದೆ.

ಜೀವನ + ಉತ್ಸಾಹ = ಜೀವನೋತ್ಸಾಹ – ಉ > ನೋ ಆದೇಶವಾಗಿದೆ.

ರಥ + ಉತ್ಸವ = ರಥೋತ್ಸವ – ಉ > ಥೋ ಆದೇಶವಾಗಿದೆ.

ಚತುರ + ಉಕ್ತಿ = ಚತುರೋಕ್ತಿ – ಉ > ರೋ ಆದೇಶವಾಗಿದೆ.

ವನ + ಉಚ್ಛ್ವಾಸ = ವನೋಚ್ಛ್ವಾಸ – ಉ > ನೋ ಆದೇಶವಾಗಿದೆ.

ಧರ್ಮ + ಉಪದೇಶ = ಧರ್ಮೋಪದೇಶ – ಉ > ರ್ಮೋ ಆದೇಶವಾಗಿದೆ.

ಪ್ರವಾಸ + ಉಧ್ಯಮ = ಪ್ರವಾಸೋಧ್ಯಮ – ಉ > ಸೋ ಆದೇಶವಾಗಿದೆ

ಸ್ನಾನ + ಉಪರಾಂತ = ಸ್ನಾನೋಪರಾಂತ – ಉ > ನೋ ಆದೇಶವಾಗಿದೆ

ಸಸ್ಯ + ಉಪಯೋಗಿ = ಸಸ್ಯೋಪಯೋಗಿ – ಉ > ಸ್ಯೋ ಆದೇಶವಾಗಿದೆ

ಕ) ಅ, ಆ, ಕಾರಗಳಿಗೆ 'ಋ' ಕಾರವು ಎದುರಾಗಿ ಬಂದು ಅವೆರಡರ ಸ್ಥಾನದಲ್ಲಿ 'ಅರ್' ಕಾರವು ಆದೇಶವಾಗಿ ಬರುವುದಕ್ಕೆ ಗುಣಸಂಧಿಯಲ್ಲಿ ಉದಾಹರಣೆಗಳು

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಅ, ಆ + ಋ = ಅರ್ – ಅರ್ ಕಾರ ಆದೇಶವಾಗುತ್ತದೆ.

ಮಹ + ಋಷಿ = ಮಹರ್ಷಿ – ಋ > ರ್ಷಿ ಆದೇಶವಾಗಿದೆ.

ದೇವ + ಋಷಿ = ದೇವರ್ಷಿ – ಋ > ರ್ಷಿ ಆದೇಶವಾಗಿದೆ.

ಸಪ್ತ + ಋಷಿ = ಸಪ್ತರ್ಷಿ – ಋ > ರ್ಷಿ ಆದೇಶವಾಗಿದೆ.

ಬಾಲ + ಋಷಿ = ಬಾಲರ್ಷಿ – ಋ > ರ್ಷಿ ಆದೇಶವಾಗಿದೆ.

ಬ್ರಹ್ಮ + ಋಷಿ = ಬ್ರಹ್ಮರ್ಷಿ – ಋ > ರ್ಷಿ ಆದೇಶವಾಗಿದೆ.

ರಾಜ + ಋಷಿ = ರಾಜರ್ಷಿ – ಋ > ರ್ಷಿ ಆದೇಶವಾಗಿದೆ.

**ಹೆಚ್ಚಿನ ಉದಾಹರಣೆಗಳು**

| | | |
|---|---|---|
| ಧರ್ಮೇಂದ್ರ | ಸಕಲೇಂದ್ರ | ರಾಜೇಂದ್ರ |
| ಮಹೇಂದ್ರ | ವೀರೇಂದ್ರ | ನರೇಶ |
| ಅಮರೇಶ | ವಿಶ್ವೇಶ | ಸಿದ್ದೇಶ |
| ಸಂಗಮೇಶ | ದಾನೇಶ | ಭರತೇಶ |
| ಧರ್ಮೇತರ | ವಿವಾಹೇತರ | ಯುದ್ಧೇತರ |
| ರಮ್ಯೇತರ | ಪಾಠೇತರ | ಶಬ್ದೇತರ |
| ಪುಣ್ಯೇತರ | ದೈವೇತರ | ಜ್ಞಾನೇತರ |
| ಶಿವೇತರ | ಶಸ್ತ್ರೋತ್ತರ | ಧರ್ಮೋತ್ತರ |
| ಯುದ್ಧೋತ್ತರ | ಮಹೋದಯ | ಧರ್ಮೋದಯ |
| ಕರ್ಮೋದಯ | ಗಂಗೋದಯ | ಮೋಕ್ಷೋದಯ |
| ಧರ್ಮೋದಯ | ಕರ್ಮೋದಯ | ಗಂಗೋದಯ |
| ಮೋಕ್ಷೋದಯ | ಧರ್ಮೋಚಿತ | ಅರ್ಥೋಚಿತ |
| ಜ್ಞಾನೋಚಿತ | ಜ್ಞಾನೋನ್ನತಿ | ಉನ್ನತೋನ್ನತಿ |

| | | |
|---|---|---|
| ಪಾಠೋನ್ನತಿ | ವಿಚಾರೋನ್ನತಿ | ಆಚಾರೋನ್ನತಿ |
| ಪದೋನ್ನತಿ | ಲೋಕೋಕ್ತಿ | ಧರ್ಮೋಕ್ತಿ |
| ಚತುರೋಕ್ತಿ | ಜ್ಞಾನೋಕ್ತಿ | ಯುದ್ಧೋಕ್ತಿ |
| ಏಕೋಕ್ತಿ | ಮಹೋರ್ಮಿ | ಗಂಗೋರ್ಮಿ |
| ವಿಜಯೋತ್ಸವ | ಜಾತ್ರೋತ್ಸವ | ಶಿಬಿರೋತ್ಸವ |
| ಕಾರ್ಥಿಕೋತ್ಸವ | ಸಹಸ್ರಮಾನೋತ್ಸವ | ದಶಮಾನೋತ್ಸವ |
| ವಿವಾಹೋತ್ಸವ | ಅಮರೋತ್ಸವ | ವಚನೋತ್ಸವ |
| ಜ್ಞಾನೋಪದೇಶ | ಮೇದೋಪದೇಶ | ಭಯೋತ್ಪಾದನೆ |
| ಸಮರೋತ್ಪಾದನೆ | ಕಲೋತ್ಪಾದನೆ | ನಾಟ್ಯೋತ್ಸಾಹ |
| ಜ್ಞಾನೋತ್ಸಾಹ | ಭೈಯೋತ್ಪಾದನೆ | ಸಮರಾತ್ಪಾದನೆ |
| ಕಲೋತ್ಪಾದನೆ | ಹೈನೋತ್ಪಾದನೆ | ವ್ಯವಸಾಯೋಪಚಾರ |
| ಅಕ್ಷರೋಪಚಾರ | ಸಮಯೋಪಾದಿ | ಕರ್ಮಲೋಪಾದಿ |
| ಧರ್ಮೋಪಾದಿ | ಸಮರೋಪಾದಿ | ಧರ್ಮೋಪಾರಂತ |
| ಯುದ್ಧೋಪಾರಂತ | ತೈಲೋತ್ಪನ್ನ | ಗೃಹೋತ್ಪನ್ನ |
| ಭಯೋತ್ಪನ್ನ | ಹವ್ಯಾಸೋಕ್ತ | ಶಾಸ್ತ್ರೋಕ್ತ |
| ವೇದೋಕ್ತ | ಪೀಠೋಪಕರಣ | ಯುದ್ಧೋಪಕರಣ |
| ಮಾಗೋಪಾಯ | ತಂತ್ರೋಪಾಯ | ರಕ್ಷಣೋಧ್ಯಮ |
| ಪತ್ರಿಕೋಧ್ಯಮ | ಪ್ರವಾಸೋಧ್ಯಮ | ಧರ್ಮೋಲ್ಲಂಘನೆ |
| ಶಾಸನೋಲ್ಲಂಘನೆ | ಆದೇಶೋಲ್ಲಂಘನೆ | ಅಧಿಕಾರೋಲ್ಲಂಘನೆ |
| ನಗರೋದ್ಯೋಗ | ಗೃಹೋದ್ಯೋಗ | ಗ್ರಾಮೋಧ್ಯೋಗ |
| ಸತತೋದ್ಯೋಗ | ಹಿಂಸೋನ್ಮಾದ | |

ಈ ಪ್ರಕಾರವಾಗಿ ಗುಣಸಂಧಿ ನಿಯಮಾನುಸಾರವಾಗಿ ತಮ್ಮ ಸ್ವರೂಪವನ್ನು ಉಳಿಸಿಕೊಂಡಿದೆ.

೩. ವೃದ್ಧಿಸಂಧಿ: ಸಾಮಾನ್ಯವಾಗಿ ಅ, ಆ, ಕಾರಗಳ ಮುಂದೆ ಏ, ಐ, ಕಾರವು ಬಂದಾಗ 'ಐ' ಕಾರವೂ ಓ, ಔ, ಕಾರವು ಬಂದಾಗ 'ಔ' ಕಾರವೂ ಆದೇಶವಾಗಿ ಬಂದರೆ ವೃದ್ಧಿಸಂಧಿ ಎನಿಸುವುದು.

ಈ ಸಂಧಿ ನಿಯಮದ ಸಾರಾಂಶ ಸೂಚಿ ಕೆಳಗಿನಂತಿದೆ.

ಅ) ಅ, ಆ + ಏ, ಐ = ಐ (ಆದೇಶ)

ಆ) ಅ, ಆ + ಓ, ಔ = ಔ (ಆದೇಶ)

ಅ) ಅ, ಆ + ಏ, ಐ = ಐ ಆದೇಶಕ್ಕೆ ಉದಾಹರಣೆಗಳನ್ನು ಗಮನಿಸೋಣ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಏಕ + ಏಕ = ಏಕೈಕ – ಏ > ಕೈ ಆದೇಶವಾಗಿದೆ

ಶಿವ + ಐಕ್ಯ = ಶಿವೈಕ್ಯ – ಐ > ವೈ ಆದೇಶವಾಗಿದೆ

ಜನ + ಐಕ್ಯ = ಜನೈಕ್ಯ – ಐ > ನೈ ಆದೇಶವಾಗಿದೆ

ಭಾವ + ಐಕ್ಯ = ಭಾವೈಕ್ಯ – ಐ > ವೈ ಆದೇಶವಾಗಿದೆ

ಘನ + ಐಶ್ವರ್ಯ = ಘನೈಶ್ವರ್ಯ – ಐ > ನೈ ಆದೇಶವಾಗಿದೆ

ಲೋಕ + ಏಕವೀರ = ಲೋಕೈಕವೀರ – ಏ > ಕೈ ಆದೇಶವಾಗಿದೆ

ವಿದ್ಯಾ + ಏಕಧನ = ವಿದ್ಯೈಕಧನ – ಏ > ದ್ಯೈ ಆದೇಶವಾಗಿದೆ

ಬ) ಅ, ಆ + ಔ = ಔ ಆದೇಶಕ್ಕೆ ಉದಾಹರಣೆಗಳನ್ನು ಗಮನಿಸೋಣ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ವನ + ಔಷಧ = ವನೌಷಧ – ಔ > ನೌ ಆದೇಶವಾಗಿದೆ

ಮಹಾ + ಔನ್ನತ್ಯ = ಮಹೌನ್ನತ್ಯ – ಔ > ಹೌ ಆದೇಶವಾಗಿದೆ

ಗಂಗಾ + ಓಘ = ಗಂಗೌಘ – ಓ > ಗೌ ಆದೇಶವಾಗಿದೆ

ದಿವ್ಯ + ಔಷಧಿ = ದಿವ್ಯೌಷಧಿ – ಔ > ವ್ಯೌ ಆದೇಶವಾಗಿದೆ

ಮಹಾ + ಔದಾರ್ಯ = ಮಹೌದಾರ್ಯ – ಔ > ಹೌ ಆದೇಶವಾಗಿದೆ

ಈ ಪ್ರಕಾರವಾಗಿ ವೃದ್ಧಿಸಂಧಿಯು ತನ್ನ ಸ್ವರೂಪವನ್ನು ಪಡೆದುಕೊಂಡಿದೆ.

**೪) ಯಣ್‌ಸಂಧಿ:** ಯಣ್‌ಸಂಧಿ ಎಂದರೆ ಪೂರ್ವಸ್ವರಗಳಿಗೆ ಸವರ್ಣವಲ್ಲದ ಸ್ವರ ಪರವಾದರೆ 'ಯ' ಕಾರವು, ಪಶ್ಚ ಸ್ವರಗಳಿಗೆ 'ವ' ಕಾರವು, 'ಋ' ಕಾರಕ್ಕೆ 'ರ' ಕಾರವೂ ಆದೇಶವಾಗಿ ಬರುವುದೇ ಯಣ್‌ಸಂಧಿ. ಅಥವಾ

ಪೂರ್ವಪದದ ಅಂತ್ಯ ಸ್ವರಗಳಾದ ಇ, ಈ, ಉ, ಊ, ಋ ಕಾರಗಳ ಮುಂದೆ ಸವರ್ಣವಲ್ಲದ ಸ್ವರಗಳು ಬಂದರೆ ಇ, ಈ, ಕಾರಗಳಿಗೆ ಆದೇಶವಾಗಿ 'ಯ'ಕಾರವೂ ಉ, ಊ ಕಾರಗಳಿಗೆ ಆದೇಶವಾಗಿ 'ವ' ಕಾರವೂ 'ಋ' ಕಾರಕ್ಕೆ ರೇಫ ಅಥವಾ 'ರ'ಕಾರವೂ ಆದೇಶವಾಗಿ ಬರುವುದಕ್ಕೆ ಯಣ್‌ಸಂಧಿ ಎನ್ನುವರು.

ಯಣ್‌ಸಂಧಿ ನಿಯಮದ ಸಾರಾಂಶ ಸೂಚಿ ಕೆಳಗಿನಂತಿದೆ.

ಅ) ಇ, ಈ + ಅ, ಆ / ಉ, ಊ = ಯ್ ಕಾರ ಆದೇಶವಾಗುತ್ತದೆ.

ಬ) ಉ, ಊ + ಅ, ಆ / ಇ, ಈ = ವ್ ಕಾರ ಆದೇಶವಾಗುತ್ತದೆ.

ಕ) ಋ + ಅ,ಆ/ ಇ,ಈ/ ಉ,ಊ = ರ್/ರೇಫ್ ಕಾರ ಆದೇಶವಾಗುತ್ತದೆ.

ಅ) ಇ, ಈ + ಅ, ಆ / ಉ, ಊ = ಯ್ ಕಾರ ಆದೇಶವಾಗುತ್ತದೆ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಇತಿ + ಆದಿ = ಇತ್ಯಾದಿ – ಇ > ತ್ಯಾ ಆದೇಶವಾಗಿದೆ

ಅತಿ + ಅಂತ = ಅತ್ಯಂತ – ಇ > ತ್ಯ ಆದೇಶವಾಗಿದೆ

ಅಧಿ + ಆತ್ಮ = ಅಧ್ಯಾತ್ಮ – ಇ > ಧ್ಯಾ ಆದೇಶವಾಗಿದೆ

ಗತಿ + ಅಂತರ = ಗತ್ಯಂತರ – ಇ > ತ್ಯ ಆದೇಶವಾಗಿದೆ

ಇತಿ + ಅರ್ಥ = ಇತ್ಯರ್ಥ – ಇ > ತ್ಯ ಆದೇಶವಾಗಿದೆ

ಅತಿ + ಉಗ್ರ = ಅತ್ಯುಗ್ರ – ಇ > ತ್ಯು ಆದೇಶವಾಗಿದೆ

ಅತಿ + ಉತ್ತಮ = ಅತ್ಯುತ್ತಮ – ಇ > ತ್ಯು ಆದೇಶವಾಗಿದೆ

ಜಾತಿ + ಅತೀತ = ಜಾತ್ಯಾತೀತ – ಇ > ತ್ಯಾ ಆದೇಶವಾಗಿದೆ

ಕೋಟಿ + ಅಧಿಪತಿ = ಕೋಟ್ಯಾಧಿಪತಿ – ಇ > ಟ್ಯಾ ಆದೇಶವಾಗಿದೆ

ಬ) ಉ, ಊ + ಅ, ಆ / ಇ, ಈ = ವ್ ಕಾರ ಆದೇಶವಾಗುತ್ತದೆ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಮನು + ಅಂತರ = ಮನ್ವಂತರ – ಉ > ನ್ವ ಆದೇಶವಾಗಿದೆ

ಗುರು + ಆಜ್ಞೆ = ಗುರ್ವಾಜ್ಞೆ – ಉ > ರ್ವಾ ಆದೇಶವಾಗಿದೆ

ವಧೂ + ಅನ್ವೇಷಣೆ = ವಧ್ವನ್ವೇಷಣೆ – ಊ > ಧ್ವ ಆದೇಶವಾಗಿದೆ

ವಧೂ + ಆಗಮನ = ವದ್ವಾಗಮನ – ಊ > ದ್ವಾ ಆದೇಶವಾಗಿದೆ

ವಧೂ + ಆಭರಣ = ವಧ್ವಾಭರಣ – ಊ > ಧ್ವಾ ಆದೇಶವಾಗಿದೆ

ವಧೂ + ಇನಂ = ವಧ್ವಿನಂ – ಊ > ಧ್ವಿ ಆದೇಶವಾಗಿದೆ

ಕ) ಋ + ಅ,ಆ/ ಇ,ಈ/ ಉ,ಊ = ರ್/ರೇಫ್ ಕಾರ ಆದೇಶವಾಗುತ್ತದೆ.

**ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ**

ಪಿತೃ + ಅರ್ಜಿತ = ಪಿತ್ರಾರ್ಜಿತ – ಋ > ತ್ರಾ ಆದೇಶವಾಗಿದೆ.

ಭ್ರಾತೃ + ಊರ್ಜ = ಭ್ರಾತ್ರೂರ್ಜ – ಋ > ತ್ರೂ ಆದೇಶವಾಗಿದೆ.

ಮಾತೃ + ಉಪದೇಶ = ಮಾತ್ರೋಪದೇಶ – ಋ > ತ್ರೋ ಆದೇಶವಾಗಿದೆ.

ಕತೃ + ಅರ್ಥ = ಕರ್ತ್ರಾರ್ಥ – ಋ > ರ್ತ್ರಾ ಆದೇಶವಾಗಿದೆ.

ಗುರು + ಆಜ್ಞೆ = ಗುರ್ವಾಜ್ಞೆ – ಋ > ರ್ವಾ ಆದೇಶವಾಗಿದೆ.

ಮಾತೃ + ಅಂಶ = ಮಾತ್ರಾಂಶ – ಋ > ತ್ರಾ ಆದೇಶವಾಗಿದೆ.

ಪಿತೃ + ಅರ್ಥ = ಪಿತ್ರರ್ಥ – ಋ > ತ್ರ ಆದೇಶವಾಗಿದೆ.

ಈ ರೀತಿಯಾಗಿ ಯಣ್‌ಸಂಧಿಯು ನಿಯಮಾನುಸಾರ ಯ್, ವ್, ರ್ ಆದೇಶಗಳನ್ನು ಪಡೆಯುತ್ತದೆ ಹಾಗೂ ಇದರ ಸ್ವರೂಪವೂ ಈ ತೆರನಾಗಿದೆ.

## ii) ಸಂಸ್ಕೃತದ ವ್ಯಂಜನ ಸಂಧಿಗಳು

ಸಂಸ್ಕೃತದಲ್ಲೂ ಸಹ ಹೆಸರೇ ಸೂಚಿಸುವಂತೆ ವ್ಯಂಜನಗಳ ವ್ಯತ್ಯಾಸಗಳಿಂದ ಆಗುವ ಸಂಧಿಗೆ ವ್ಯಂಜನ ಸಂಧಿಗಳೆಂದು ಕರೆಯುತ್ತಾರೆ. ಈ ವ್ಯಂಜನ ಸಂಧಿಗಳಲ್ಲಿ ಪೂರ್ವೋತ್ತರ ಪದಗಳಲ್ಲಿಯ ವ್ಯಂಜನಗಳು ಕೆಲವಾರು ವಿಶಿಷ್ಟ ಬದಲಾವಣೆಗಳನ್ನು ಪಡೆಯುವುದರಿಂದ ನಡೆಯುವ ಕ್ರಿಯೆ.

೧. ಜಸ್ತ್ವಸಂಧಿ, ೨. ಶ್ಚುತ್ವಸಂಧಿ, ೩. ಲಕಾರದ್ವಿತ್ವ ಸಂಧಿ, ೪. ಷ್ಟುತ್ವ ಸಂಧಿ,
೫. ಛತ್ವ ಸಂಧಿ, ೬. ಅನುನಾಸಿಕ ಸಂಧಿ, ೭. ವಿಸರ್ಗ ಸಂಧಿ

ಈ ಏಳು ತರಹದ ಸಂಸ್ಕೃತ ವ್ಯಂಜನ ಸಂಧಿಗಳಲ್ಲಿ ಪೂರ್ವಪದದ ಕೊನೆಯ ವ್ಯಂಜನಕ್ಕೆ ಬದಲಾಗಿ ಬೇರೊಂದು ವ್ಯಂಜನವು ಆದೇಶವಾಗಿ ಬರುತ್ತದೆ.

ಸಾಮಾನ್ಯವಾಗಿ ಕನ್ನಡ ವ್ಯಂಜನಸಂಧಿಗಳಲ್ಲಿ ಆದೇಶಕಾರ್ಯವು ಉತ್ತರ ಪದದಲ್ಲಿ ಆಗುತ್ತಿದ್ದರೆ ಸಂಸ್ಕೃತದ ವ್ಯಂಜನ ಸಂಧಿಗಳಲ್ಲಿ ಪೂರ್ವಪದದಲ್ಲಿ ಆಗುತ್ತದೆ. ಈ ಏಳೂ ಸಂಧಿಗಳನ್ನು ಸಂಸ್ಕೃತದ ವ್ಯಂಜನ ಸಂಧಿಗಳೆಂದು ಕೆಲವು ಕನ್ನಡ, ಹೊಸಗನ್ನಡ ವ್ಯಾಕರಣ ಗ್ರಂಥಗಳಲ್ಲಿ ಹೇಳಿದೆ. ಆದರೆ ಏಳನೇ ಪ್ರಕಾರವಾದ 'ವಿಸರ್ಗ ಸಂಧಿ'ಯನ್ನು ಈ ವ್ಯಂಜನ ಸಂಧಿಗಳಲ್ಲಿ ಸೇರಿಸುವುದು ಅಷ್ಟೊಂದು ವ್ಯವಸ್ಥಿತವಾದ ವರ್ಗೀಕರಣವಲ್ಲ. ಆದ್ದರಿಂದ ಈ ಸಂಧಿಯನ್ನು ಪ್ರತ್ಯೇಕವಾಗಿ ಹೆಸರಿಸಬಹುದೆಂಬುದು ನನ್ನ ಅಭಿಮತವಾಗಿದೆ.

**೧. ಜಶ್ತ್ವಸಂಧಿ:** ಪೂರ್ವಪದದ ಕೊನೆಯಲ್ಲಿರುವ ವರ್ಗದ ಪ್ರಥಮಾಕ್ಷರಗಳಿಗೆ ಯಾವ ವರ್ಣ ಎದುರಾದರೂ ಅದೇ ವರ್ಗದ ಮೂರನೇ ಅಕ್ಷರ ಆದೇಶವಾಗಿ ಬರಲು ಜಶ್ತ್ವಸಂಧಿ ಎನಿಸಬಹುದು. ಅಥವಾ ಇನ್ನೂ ವಿವರಣಾತ್ಮಕವಾಗಿ ಹೇಳಬೇಕೆಂದರೆ ಪೂರ್ವಪದದ ಕೊನೆಯಲ್ಲಿ ವರ್ಗದ ಪ್ರಥಮ ವರ್ಣಗಳಾದ ಕ, ಚ, ಟ, ತ, ಪ ವ್ಯಂಜನಗಳಿಗೆ ಉತ್ತರ ಪದದ

ಮೊದಲಲ್ಲಿ ಯಾವ ವರ್ಣ ಬಂದರೂ ಕ್ರಮವಾಗಿ ಅದೇ ವರ್ಗದ ತೃತೀಯ ವರ್ಣಗಳಾದ ಗ, ಜ, ಡ, ದ, ಬ, ವರ್ಣಗಳು ಆದೇಶವಾಗಿ ಬರುವುದಕ್ಕೆ ಜಶ್ತ್ವಸಂಧಿ ಎಂದು ಕರೆಯುತ್ತಾರೆ. ಜಶ್ತ್ವಸಂಧಿ ನಿಯಮದ ಸಾರಾಂಶ ಸೂಚಿ ಇಂತಿದೆ.

ಕ್ > ಗ್, ಚ್ > ಜ್, ಟ್ > ಡ್, ತ್ > ದ್, ಪ್ > ಬ್ ಈ ತೆರನಾಗಿದೆ. ಜಶ್ತ್ವಸಂಧಿ ನಿಯಮಕ್ಕೆ ಸಂಬಂಧಿಸಿದ ಉದಾಹರಣೆಗಳು ಈ ಕೆಳಗಿನಂತಿವೆ.

**ಕ್, ಕಾರಕ್ಕೆ ಗ್, ಕಾರಾದೇಶವಾಗಿರುವುದಕ್ಕೆ ಉದಾಹರಣೆಗಳು.**

| ಪೂರ್ವಪದ + ಉತ್ತರಪದ = ಸಂಧಿಪದ | – ಬದಲಾವಣೆ |
|---|---|
| ವಾಕ್ + ಈಶ = ವಾಗೀಶ | – ಕ್ ಸ್ಥಳದಲ್ಲಿ ಗ್ ಆದೇಶವಾಗಿದೆ. |
| ವಾಕ್ + ವಾದ = ವಾಗ್ವಾದ | – ಕ್ ಸ್ಥಳದಲ್ಲಿ ಗ್ ಆದೇಶವಾಗಿದೆ. |
| ವಾಕ್ + ದಾನ = ವಾಗ್ದಾನ | – ಕ್ ಸ್ಥಳದಲ್ಲಿ ಗ್ ಆದೇಶವಾಗಿದೆ. |
| ವಾಕ್ + ದೇವಿ = ವಾಗ್ದೇವಿ | – ಕ್ ಸ್ಥಳದಲ್ಲಿ ಗ್ ಆದೇಶವಾಗಿದೆ. |
| ವಾಕ್ + ವೈಭವ = ವಾಗ್ವೈಭವ | – ಕ್ ಸ್ಥಳದಲ್ಲಿ ಗ್ ಆದೇಶವಾಗಿದೆ. |
| ದಿಕ್ + ಅಂತ = ದಿಗಂತ | – ಕ್ ಸ್ಥಳದಲ್ಲಿ ಗ್ ಆದೇಶವಾಗಿದೆ. |

**ಚ್, ಕಾರಕ್ಕೆ ಜ್, ಕಾರಾದೇಶವಾಗಿರುವುದಕ್ಕೆ ಉದಾಹರಣೆಗಳು.**

| ಪೂರ್ವಪದ + ಉತ್ತರಪದ = ಸಂಧಿಪದ | – ಬದಲಾವಣೆ |
|---|---|
| ಅಚ್ + ಅದಿನ = ಅಜಾದಿನ | – ಚ್ ಸ್ಥಳದಲ್ಲಿ ಜ್ ಆದೇಶವಾಗಿದೆ. |
| ಅಚ್ + ಆದಿ = ಅಜಾದಿ | – ಚ್ ಸ್ಥಳದಲ್ಲಿ ಜ್ ಆದೇಶವಾಗಿದೆ. |
| ಅಚ್ + ಅಂತ = ಅಜಂತ | – ಚ್ ಸ್ಥಳದಲ್ಲಿ ಜ್ ಆದೇಶವಾಗಿದೆ. |
| ಅಚ್ + ವರ್ಣ = ಅಜ್ವರ್ಣ | – ಚ್ ಸ್ಥಳದಲ್ಲಿ ಜ್ ಆದೇಶವಾಗಿದೆ. |

**ಟ್, ಕಾರಕ್ಕೆ ಡ್ ಕಾರಾದೇಶವಾಗಿರುವುದಕ್ಕೆ ಉದಾಹರಣೆಗಳು.**

| ಪೂರ್ವಪದ + ಉತ್ತರಪದ = ಸಂಧಿಪದ | – ಬದಲಾವಣೆ |
|---|---|
| ಷಟ್ + ಆನನ = ಷಡಾನನ | – ಟ್ ಸ್ಥಳದಲ್ಲಿ ಡ್ ಆದೇಶವಾಗಿದೆ. |
| ಷಟ್ + ಅಂಗ = ಷಡಂಗ | – ಟ್ ಸ್ಥಳದಲ್ಲಿ ಡ್ ಆದೇಶವಾಗಿದೆ. |
| ಷಟ್ + ಭುಜ = ಷಡ್ಭುಜ | – ಟ್ ಸ್ಥಳದಲ್ಲಿ ಡ್ ಆದೇಶವಾಗಿದೆ. |
| ಷಟ್ + ವರ್ಣ = ಷಡ್ವರ್ಣ | – ಟ್ ಸ್ಥಳದಲ್ಲಿ ಡ್ ಆದೇಶವಾಗಿದೆ. |
| ಷಟ್ + ವರ್ಗ = ಷಡ್ವರ್ಗ | – ಟ್ ಸ್ಥಳದಲ್ಲಿ ಡ್ ಆದೇಶವಾಗಿದೆ. |

ತ್, ಕಾರಕ್ಕೆ ದ್ ಕಾರಾದೇಶವಾಗಿರುವುದಕ್ಕೆ ಉದಾಹರಣೆಗಳು.

| | |
|---|---|
| **ಪೂರ್ವಪದ + ಉತ್ತರಪದ = ಸಂಧಿಪದ** | **– ಬದಲಾವಣೆ** |
| ಸತ್ + ಆನಂದ = ಸದಾನಂದ | – ತ್ ಸ್ಥಳದಲ್ಲಿ ದ್ ಆದೇಶವಾಗಿದೆ. |
| ಚಿತ್ + ಆನಂದ = ಚಿದಾನಂದ | – ತ್ ಸ್ಥಳದಲ್ಲಿ ದ್ ಆದೇಶವಾಗಿದೆ. |
| ಸತ್ + ಭಾವ = ಸದ್ಭಾವ | – ತ್ ಸ್ಥಳದಲ್ಲಿ ದ್ ಆದೇಶವಾಗಿದೆ. |
| ಸತ್ + ಮನ = ಸದ್ಮನ | – ತ್ ಸ್ಥಳದಲ್ಲಿ ದ್ ಆದೇಶವಾಗಿದೆ. |
| ಸತ್ + ಆಚಾರ = ಸದಾಚಾರ | – ತ್ ಸ್ಥಳದಲ್ಲಿ ದ್ ಆದೇಶವಾಗಿದೆ. |

**ಪ್, ಕಾರಕ್ಕೆ ಬ್ ಕಾರಾದೇಶವಾಗಿರುವುದಕ್ಕೆ ಉದಾಹರಣೆಗಳು.**

| | |
|---|---|
| **ಪೂರ್ವಪದ + ಉತ್ತರಪದ = ಸಂಧಿಪದ** | **– ಬದಲಾವಣೆ** |
| ಅಪ್ + ಜ = ಅಬ್ಜ | – ಪ್ ಕಾರಕ್ಕೆ ಬ್ ಆದೇಶವಾಗಿದೆ. |
| ಅಪ್ + ಧಿ = ಅಬ್ಧಿ | – ಪ್ ಕಾರಕ್ಕೆ ಬ್ ಆದೇಶವಾಗಿದೆ. |
| ಅಪ್ + ಅಂಶ = ಅಬಂಶ | – ಪ್ ಕಾರಕ್ಕೆ ಬ್ ಆದೇಶವಾಗಿದೆ. |
| ಅಪ್ + ಬಿಂದು = ಅಬ್ಬಿಂದು | – ಪ್ ಕಾರಕ್ಕೆ ಬ್ ಆದೇಶವಾಗಿದೆ. |

ಇತ್ಯಾದಿ ಜಶ್ತ್ವಸಂಧಿಯ ಉದಾಹರಣೆಗಳನ್ನು ಗಮನಿಸಬಹುದಾಗಿದೆ.

**೨. ಶ್ಚುತ್ವಸಂಧಿ:** 'ಶ್ಚು' ಎಂದರೆ 'ಶ್' ಕಾರ ಮತ್ತು 'ಚ' ವರ್ಣಾಕ್ಷರಗಳು (ಚ, ಛ, ಜ, ಝ, ಞ) ಪೂರ್ವಪದದ ಕೊನೆಯಲ್ಲಿ 'ಸ' ಕಾರವಾಗಲೀ, 'ತ' ವರ್ಗವಾಗಲೀ ಇದ್ದು, ಉತ್ತರ ಪದದ ಮೊದಲಲ್ಲಿ ಕ್ರಮವಾಗಿ 'ಶ' ಕಾರವಾಗಲೀ 'ಚ' ವರ್ಗವಾಗಲೀ ಬಂದರೆ 'ಶ' ಕಾರ, 'ಚ' ಕಾರಗಳು ಆದೇಶವಾಗಿ ಬರುವುದಕ್ಕೆ ಶ್ಚುತ್ವಸಂಧಿ ಎನ್ನುವರು. ಇನ್ನೂ ವಿವರವಾಗಿ ಹೇಳುವುದಾದರೆ ಪೂರ್ವಪದದ ಕೊನೆಯ ಅಕ್ಷರವು 'ಸ' ಕಾರವಾಗಿದ್ದು, 'ಶ' ಕಾರ ಅಥವಾ 'ಚ' ವರ್ಗಗಳು ಬಂದಾಗ 'ಶ' ಕಾರವು ಬರುತ್ತದೆ.

ಪೂರ್ವಪದದ ಕೊನೆಯ ಅಕ್ಷರವು 'ತ' ವರ್ಗಾಕ್ಷರವು ಇದ್ದಾಗ ಅವುಗಳ ಮುಂದೆ 'ಶ' ಕಾರ ಅಥವಾ 'ಚ' ವರ್ಗಾಕ್ಷರಗಳು ಬಂದರೆ 'ಚ' ವರ್ಗಾಕ್ಷರವೇ ಬರುತ್ತದೆ. ಮತ್ತೊಂದು ವಿಧಾನದಲ್ಲಿ ತಿಳಿಯುವುದಾದರೆ, 'ಸ' ಕಾರ 'ತ' ವರ್ಗಾಕ್ಷರಗಳಿಗೆ 'ಶ' ಕಾರ 'ಚ' ವರ್ಗಾಕ್ಷರಗಳೂ ಆದೇಶವಾಗಿ ಬರುತ್ತದೆ. ಅಂದರೆ ಪೂರ್ವಪದದಲ್ಲಿಯ ಸ್, ತ್, ಥ್, ದ್, ಧ್, ನ್ ಈ ವ್ಯಂಜನಗಳ ಮುಂದೆ ಉತ್ತರ ಪದದಲ್ಲಿ ಶ್, ಚ್, ಛ್, ಜ್, ಝ್, ಞ್, ವ್ಯಂಜನಗಳು ಆದೇಶಗಳಾಗುವುದಕ್ಕೆ ಶ್ಚುತ್ವಸಂಧಿ ಎನ್ನುವರು.

ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ

ಮನಸ್ + ಶುದ್ಧಿ = ಮನಶ್ಶುದ್ಧಿ – ಸ ಕಾರಕ್ಕೆ ಶ ಕಾರಾದೇಶ

ಮನಸ್ + ಶಾಂತಿ = ಮನಶ್ಶಾಂತಿ – ಸ ಕಾರಕ್ಕೆ ಶ ಕಾರಾದೇಶ

ಯಶಸ್ + ಚಂದ್ರ = ಯಶಶ್ಚಂದ್ರ – ಸ ಕಾರಕ್ಕೆ ಚ ಕಾರಾದೇಶ

ಸತ್ + ಚಿತ್ರ = ಸಚ್ಚಿತ್ರ – ತ ಕಾರಕ್ಕೆ ಚ ಕಾರಾದೇಶ

ಬೃಹತ್ + ಛತ್ರ = ಬೃಹಚ್ಛತ್ರ – ತ ಕಾರಕ್ಕೆ ಚ ಕಾರಾದೇಶ

ಜಗತ್ + ಜ್ಯೋತಿ = ಜಗಜ್ಯೋತಿ – ತ ಕಾರಕ್ಕೆ ಜ ಕಾರಾದೇಶ

ತದ್ + ಜಾತಿ = ತಜ್ಜಾತಿ – ದ ಕಾರಕ್ಕೆ ಜ ಕಾರಾದೇಶ

ಭಗವತ್ + ಚಿಂತನ = ಭಗವಚ್ಚಿಂತನ – ತ ಕಾರಕ್ಕೆ ಚ ಕಾರಾದೇಶ

ವಿದ್ಯುತ್ + ಶಕ್ತಿ = ವಿದ್ಯುಚ್ಛಕ್ತಿ – ತ ಕಾರಕ್ಕೆ ಛ ಕಾರಾದೇಶ

ಇತ್ಯಾದಿಯಾಗಿ ಉದಾಹರಣೆಗಳನ್ನು ಗಮನಿಸಬಹುದು.

೩. **ಲಕಾರದ್ವಿತ್ವ ಸಂಧಿ:** 'ತ' ಕಾರದ ಮುಂದೆ 'ಲ'ಕಾರ ಬಂದರೆ 'ತ' ಕಾರದ ಸ್ಥಳದಲ್ಲಿ 'ದ'ಕಾರವೂ ನಂತರ 'ದ'ಕಾರದ ಸ್ಥಳದಲ್ಲಿ 'ಲ'ಕಾರವೂ ಬಂದು ಸಂಧಿಯಾಗುವಾಗ 'ಲ'ಕಾರವು 'ದ್ವಿತ್ವ' ಅಥವಾ ಒತ್ತಕ್ಷರವಾಗಿ (ಸಜಾತಿಯ) ಮಾರ್ಪಡುವ ವಿಧಾನವನ್ನೇ 'ಲ'ಕಾರ ದ್ವಿತ್ವಸಂಧಿ ಎಂದು ಕರೆಯುವರು.

ಸತ್ + ಲಕ್ಷಣ = ಸದ್ + ಲಕ್ಷಣ – ತ್ ಕಾರಕ್ಕೆ ದ್ ಕಾರಾದೇಶ

ಸದ್ + ಲಕ್ಷಣ = ಸಲ್ + ಲಕ್ಷಣ – ದ್ ಕಾರಕ್ಕೆ ಲ್ ಕಾರಾದೇಶ

ಸಲ್ + ಲಕ್ಷಣ = ಸಲ್ಲಕ್ಷಣ – ಲ ಕಾರ ದ್ವಿತ್ವಗೊಂಡಿದೆ.

ವಿದ್ಯುತ್ + ಅಲೆ = ವಿದ್ಯುದ್ + ಲತೆ – ತ್ ಕಾರಕ್ಕೆ ದ್ ಕಾರಾದೇಶ

ವಿದ್ಯುತ್ + ಅಲೆ = ವಿದ್ಯುಲ್ಲತೆ – ಲ ಕಾರ ದ್ವಿತ್ವಗೊಂಡಿದೆ.

ಈ ಪ್ರಕಾರದ ಸಂಧಿ ವಿಧಾನವು ಕನ್ನಡದ ಪ್ರೌಢ ಪ್ರಾಥಮಿಕ ಹಂತದಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿಲ್ಲ.

೪. **ಷ್ಟುತ್ವಸಂಧಿ:** 'ಸ' ಕಾರ, 'ತ' ವರ್ಗ ವ್ಯಂಜನಗಳ ಮುಂದೆ 'ಷ'ಕಾರ 'ಟ'ವರ್ಗ ವ್ಯಂಜನಗಳು ಬಂದರೆ ಕ್ರಮವಾಗಿ 'ಷ'ಕಾರ 'ಟ' ವರ್ಗ ವ್ಯಂಜನಗಳು ಆದೇಶವಾಗುವುದು.

ಇನ್ನೂ ಸುಲಭವಾಗಿ ತಿಳಿಯುವುದಾದರೆ, ಪೂರ್ವಪದದ ಕೊನೆಯಲ್ಲಿ 'ಸ' ಕಾರ 'ತ'ವರ್ಗಗಳಿದ್ದು 'ಷ'ಕಾರ 'ಟ' ವರ್ಗಗಳು ಪರವಾದರೆ 'ಸ'ಕಾರಕ್ಕೆ 'ಷ'ಕಾರವೂ 'ತ' ವರ್ಗಕ್ಕೆ 'ಟ' ವರ್ಗವೂ ಆದೇಶವಾಗಿ ಬರುವುದಕ್ಕೆ ಷ್ಟುತ್ವ ಸಂಧಿ ಎನ್ನುವರು.

ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ

ತಪಸ್ + ಷಡ್ಭಾಗ = ತಪಷ್ಷಡ್ಭಾಗ – ಸ ಕಾರಕ್ಕೆ ಷ ಕಾರದೇಶವಾಗಿದೆ.

ಧನುಸ್ + ಟಂಕಾರ = ಧನುಷ್ಟಂಕಾರ – ಸ ಕಾರಕ್ಕೆ ಷ ಕಾರದೇಶವಾಗಿದೆ.

ತತ್ + ಟಿಟ್ಟಿಬ = ತಟ್ಟಿಟ್ಟಭ – ತ ಕಾರಕ್ಕೆ ಟ ಕಾರದೇಶವಾಗಿದೆ.

ತತ್ + ಟೀಕಾ = ತಟ್ಟೀಕಾ – ತ ಕಾರಕ್ಕೆ ಟ ಕಾರದೇಶವಾಗಿದೆ.

ಉತ್ + ಡಯನ = ಉಡ್ಡಯನ – ತ ಕಾರಕ್ಕೆ ಡ ಕಾರದೇಶವಾಗಿದೆ.

ಧನುಸ್ + ಠಂಕಾರ = ಧನುಷ್ಠಂಕಾರ – ಸ ಕಾರಕ್ಕೆ ಷ ಕಾರದೇಶವಾಗಿದೆ.

೫. **ಛತ್ವಸಂಧಿ:** ಪೂರ್ವಪದಾಂತ್ಯದಲ್ಲಿ ಅನುನಾಸಿಕವಲ್ಲದ ವರ್ಗೀಯ ವ್ಯಂಜನಕ್ಕೆ ಪರವಾದ 'ಶ' ಕಾರಕ್ಕೆ 'ಛ' ಕಾರಾದೇಶವಾಗುವುದು.

ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ

ವಿದ್ಯುತ್ + ಶಕ್ತಿ = ವಿದ್ಯುಚ್ + ಶಕ್ತಿ = ವಿದ್ಯುಚ್ಛಕ್ತಿ – ಶಕಾರಕ್ಕೆ ಛ ಕಾರಾದೇಶವಾಗಿದೆ.

ಚಿತ್ + ಶಕ್ತಿ = ಜಿಚ್ + ಶಕ್ತಿ = ಚಿಚ್ಛಕ್ತಿ – ಶಕಾರಕ್ಕೆ ಛ ಕಾರಾದೇಶವಾಗಿದೆ.

ಉತ್ + ಶ್ವಾಸ = ಉಚ್ + ಶ್ವಾಸ = ಉಚ್ಛ್ವಾಸ – ಶಕಾರಕ್ಕೆ ಛ ಕಾರಾದೇಶವಾಗಿದೆ.

ಷಟ್ + ಶಾಸ್ತ್ರ = ಷಟ್ + ಛಾಸ್ತ್ರ = ಷಟ್ಛಾಸ್ತ್ರ – ಶಕಾರಕ್ಕೆ ಛ ಕಾರಾದೇಶವಾಗಿದೆ.

ಸತ್ + ಶಿಷ್ಯ = ಷಟ್ + ಛಾಸ್ತ್ರ = ಷಟ್ಛಾಸ್ತ್ರ – ಶಕಾರಕ್ಕೆ ಛ ಕಾರಾದೇಶವಾಗಿದೆ.

ಇತ್ಯಾದಿ ಉದಹಾರಣೆಗಳನ್ನು ಗಮನಿಸಬಹುದು.

೬. **ಅನುನಾಸಿಕ ಸಂಧಿ:** ಪೂರ್ವಪದದ ಕೊನೆಯಲ್ಲಿ ಆಯಾ ವರ್ಗದ ಪ್ರಥಮಾಕ್ಷರಗಳು ಇದ್ದು, ಅವುಗಳಿಗೆ ಅನುನಾಸಿಕ ಪರವಾದರೆ ಅವುಗಳಿಗೆ ಕ್ರಮವಾಗಿ ಅದೇ ವರ್ಗದ ಅನುನಾಸಿಕ ವರ್ಣಗಳು ಆದೇಶವಾಗುತ್ತವೆ.

ಅಂದರೆ ಪೂರ್ವಪದದ ಕೊನೆಯಲ್ಲಿ ಕ, ಚ, ಟ, ತ, ಪ ಈ ವರ್ಗೀಯ ವ್ಯಂಜನಗಳ ಮುಂದೆ ಉತ್ತರ ಪದದ ಆದಿಯಲ್ಲಿ ಯಾವುದೇ ಅನುನಾಸಿಕ ವ್ಯಂಜನ ಬಂದರೆ ಅದೇ ವರ್ಗದ ಅನುನಾಸಿಕ ವ್ಯಂಜನಗಳಾದ ಙ, ಞ, ಣ, ನ, ಮ, ಗಳು ಆದೇಶವಾಗುತ್ತವೆ. ಈ ಪ್ರಕಾರದ ಸಂಧಿ ವಿಧಾನಕ್ಕೆ ಅನುನಾಸಿಕ ಸಂಧಿ ಎನ್ನುವರು.

ಪೂರ್ವಪದ + ಉತ್ತರಪದ = ಸಂಧಿಪದ – ಬದಲಾವಣೆ

ವಾಕ್ + ಮಯ = ವಾಙ್ಮಯ – ಕ ಕಾರಕ್ಕೆ ಙ ಆದೇಶವಾಗಿದೆ.

ದಿಕ್ + ಮಯ = ದಿಙ್ಮಯ – ಕ ಕಾರಕ್ಕೆ ಙ ಆದೇಶವಾಗಿದೆ.

ದಿಕ್ + ಮೂಡ = ದಿಙ್ಮೂಡ – ಕ ಕಾರಕ್ಕೆ ಙ ಆದೇಶವಾಗಿದೆ.

ಸತ್ + ಮಾನ = ಸನ್ಮಾನ – ತ ಕಾರಕ್ಕೆ ನ ಆದೇಶವಾಗಿದೆ.

ಚಿತ್ + ಮಯ = ಚಿನ್ಮಯ – ತ ಕಾರಕ್ಕೆ ನ ಆದೇಶವಾಗಿದೆ.

ತತ್ + ಮಯ = ತನ್ಮಯ – ತ ಕಾರಕ್ಕೆ ನ ಆದೇಶವಾಗಿದೆ.

ಉತ್ + ಮಾದ = ಉನ್ಮಾದ – ತ ಕಾರಕ್ಕೆ ನ ಆದೇಶವಾಗಿದೆ.

ಚಿತ್ + ಮೂಲ = ಚಿನ್ಮೂಲ – ತ ಕಾರಕ್ಕೆ ನ ಆದೇಶವಾಗಿದೆ.

ಸತ್ + ಮಾರ್ಗ = ಸನ್ಮಾರ್ಗ – ತ ಕಾರಕ್ಕೆ ನ ಆದೇಶವಾಗಿದೆ.

ಷಟ್ + ಮಾಸ = ಷಣ್ಮಾಸ – ಟ ಕಾರಕ್ಕೆ ಣ ಆದೇಶವಾಗಿದೆ.

ಷಟ್ + ಮುಖ = ಷಣ್ಮುಖ – ಟ ಕಾರಕ್ಕೆ ಣ ಆದೇಶವಾಗಿದೆ.

ಅಪ್ + ಮಯ = ಅಮ್ಮಯ – ಪ ಕಾರಕ್ಕೆ ಮ ಆದೇಶವಾಗಿದೆ.

ಅಪ್ + ಮಿತ್ರ = ಅಮ್ಮಿತ್ರ – ಪ ಕಾರಕ್ಕೆ ಮ ಆದೇಶವಾಗಿದೆ.

ಇತ್ಯಾದಿ ಉದಾಹರಣೆಗಳನ್ನು ಗಮನಿಸಬಹುದಾಗಿದೆ. ಈ ಅನುನಾಸಿಕ ಸಂಧಿಗೆ ಸಂಬಂಧಿಸಿದಂತೆ ಪೂರ್ವಪದದ ಅಂತ್ಯಾಕ್ಷರ 'ಚ' ವರ್ಗಕ್ಕೆ ಉದಾಹರಣೆಗಳು ಲಭ್ಯವಾಗುವುದಿಲ್ಲ.

**೭. ವಿಸರ್ಗಸಂಧಿ:** ೧. 'ಅ' ಕಾರದ ಮುಂದಿನ ವಿಸರ್ಗಕ್ಕೆ 'ಅ'ಕಾರವಾಗಲಿ, ಮೃದು ವಂಜ್ಯನವಾಗಲಿ ಪರವಾದರೆ ವಿಸರ್ಗದ ಸ್ಥಳದಲ್ಲಿ 'ಉ' ಕಾರಾದೇಶವಾಗುತ್ತದೆ. ಬಳಿಕ 'ಉ'ಕಾರವು ತನ್ನ ಹಿಂದಿನ 'ಅ' ಕಾರದೊಳಗೆ ಕೂಡಿ ಗುಣಸಂಧಿಯಂತೆ 'ಓ' ಕಾರವಾಗುತ್ತದೆ. ಈ 'ಓ' ಕಾರವಾಗುತ್ತದೆ. 'ಈ', 'ಓ' ಕಾರದ ಮುಂದೆ 'ಅ' ಕಾರವಿದ್ದರೆ 'ಅ' ಲೋಪವಾಗುತ್ತದೆ.

**ಉದಾಹರಣೆಗೆ:**

ಮನಃ + ಅನುರಾಗ = ಮನ + ಉ + ಅನುರಾಗ = ಮನೋನುರಾಗ

ಮನಃ + ಗಮನ = ಮನ + ಉ + ಗಮನ = ಮನೋಗಮನ

ಮನಃ + ರಂಜನ = ಮನ + ಉ + ರಂಜನ = ಮನೋರಂಜನ

ಮನಃ + ನಿಗ್ರಹ = ಮನ + ಉ + ನಿಗ್ರಹ = ಮನೋನಿಗ್ರಹ

ತಪಃ + ನಿಧಿ = ತಪ + ಉ + ನಿಧಿ = ತಪೋನಿಧಿ

ತಪಃ + ಅನುಷ್ಠಾನ = ತಪ + ಉ + ಅನುಷ್ಠಾನ = ತಪೋನುಷ್ಠಾನ

೨. ಅ, ಆ, ಕಾರಗಳ ಹೊರತು ಉಳಿದ ಸ್ವರಗಳ ಮುಂದೆ ಇರುವ ವಿಸರ್ಗಕ್ಕೆ ಸ್ವರವಾಗಲೀ, ಇಲ್ಲವೆ ಮೃದು ವ್ಯಂಜನವಾಗಲಿ ಪರವಾದರೆ ರೇಫ ಆದೇಶವಾಗುವುದು.

ಉದಾಹರಣೆಗೆ

| | |
|---|---|
| **ಪೂರ್ವಪದ + ಉತ್ತರಪದ = ಸಂಧಿಪದ** | **– ಬದಲಾವಣೆ** |
| ಹವಿಃ + ಗಂಧ = ಹವಿರ್ಗ್ಗಂದ | – ವಿಸರ್ಗಕ್ಕೆ ರ ಕಾರಾದೇಶವಾಗಿದೆ. |
| ಹಬಿಃ + ಅಂಶ = ಹಬಿರಂಶ | – ವಿಸರ್ಗಕ್ಕೆ ರ ಕಾರಾದೇಶವಾಗಿದೆ. |
| ಚಕ್ಷು + ಅಬ್ಜ = ಚಕ್ಷುರಬ್ಜ | – ವಿಸರ್ಗಕ್ಕೆ ರ ಕಾರಾದೇಶವಾಗಿದೆ. |
| ಜ್ಯೋತಿಃ + ವರ್ಷ = ಜ್ಯೋತಿರ್ವರ್ಷ | – ವಿಸರ್ಗಕ್ಕೆ ರ ಕಾರಾದೇಶವಾಗಿದೆ. |
| ಮನಃ + ಪರೀಕ್ಷೆ = ಮನರ್ಪರೀಕ್ಷೆ | – ವಿಸರ್ಗಕ್ಕೆ ರ ಕಾರಾದೇಶವಾಗಿದೆ. |
| ಮನಃ + ಮಿಲನ = ಮನರ್ಮಿಲನ | – ವಿಸರ್ಗಕ್ಕೆ ರ ಕಾರಾದೇಶವಾಗಿದೆ. |
| ನಿಃ + ಅಹಂಕಾರ = ನಿರಾಂಕಾರ | – ವಿಸರ್ಗಕ್ಕೆ ರ ಕಾರಾದೇಶವಾಗಿದೆ. |

ಈ ರೀತಿಯಾಗಿ ವಿಸರ್ಗದ ಮುಂದೆ ಸ್ವರ ಅಥವಾ ವ್ಯಂಜನ ಪರವಾದಾಗ ವಿಸರ್ಗದಲ್ಲಿ ಆಗುವ ಬದಲಾವಣೆಗಳನ್ನು 'ವಿಸರ್ಗ ಸಂಧಿ' ಎನ್ನುವರು.

ಈ ಹಿಂದೆ ತಿಳಿಸಿದ ಸಂಸ್ಕೃತದ ವ್ಯಂಜನ ಸಂಧಿಗಳಲ್ಲಿ ಪ್ರೌಢ ಹಾಗೂ ಪ್ರಾಥಮಿಕ ಶಿಕ್ಷಣ ವ್ಯಾಕರಣ ಕಲಿಕೆಯಲ್ಲಿ 'ಲ'ಕಾರ ದ್ವಿತ್ವ ಸಂಧಿ ಹಾಗೂ ಛತ್ವಸಂಧಿ, ಷ್ಟುತ್ವಸಂಧಿಗಳನ್ನು ವಿಸರ್ಗಸಂಧಿಗಳನ್ನು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಕನ್ನಡ ಸಂಧಿ ಕಲಿಕೆಯಲ್ಲಿ ವಾಸ್ತವವಾಗಿ ಕಲಿಕೆಯಿಂದ ಹೊರತಾಗಿವೆ. ಆದರೆ ಸಾಂಪ್ರದಾಯಿಕವಾಗಿ ನೋಡಬಹುದಾಗಿದೆ.

ಈ ರೀತಿಯಾಗಿ ಕನ್ನಡ ವ್ಯಾಕರಣದಲ್ಲಿ (ಅಧ್ಯಯನ) ಕಲಿಕೆಯ ಅನುಕೂಲಕ್ಕಾಗಿ ಸಂಧಿಗಳನ್ನು ಕನ್ನಡ ಸಂಧಿಗಳು ಹಾಗೂ ಸಂಸ್ಕೃತ ಸಂಧಿಗಳು ಎಂದು ಮತ್ತೆ ಅವುಗಳಲ್ಲಿ ಸ್ವರ ಸಂಧಿಗಳು ಹಾಗೂ ವ್ಯಂಜನ ಸಂಧಿಗಳೆಂದು ಪ್ರತ್ಯೇಕಿಸಿ ಅಭ್ಯಾಸ ಮಾಡಲಾಗುತ್ತಿದೆ. ಆದ್ದರಿಂದ ಈ ತೆರನಾಗಿ ಕನ್ನಡ ಸಂಧಿ ತನ್ನ ಸ್ವರೂಪವನ್ನು ಪಡೆದುಕೊಂಡಿದೆ.

**ಪ್ರಕೃತಿಭಾವ**

ಸ್ವರದ ಮುಂದೆ ಸ್ವರವು ಬಂದರೂ ಸಂಧಿಯನ್ನು ಮಾಡಬಾರದ ಸನ್ನಿವೇಶವನ್ನು 'ಪ್ರಕೃತಿಭಾವ' ಎಂದು ಕರೆಯುವರು.

೧) ಪ್ಲುತಸ್ವರಗಳ ಮುಂದೆ ಸ್ವರಬಂದರೆ ಸಂಧಿ ಮಾಡಬಾರದು.

ಅಣ್ಣಾs ಇಲ್ಲಿ ನೋಡು

ಅಮ್ಮಾs ಇದು ಬೇಡ

ರಾಮಾs ಅಲ್ಲಿಗೆ ಬಾ

ಅಕ್ಕಾs ಬೇಗ ಬಾ

೨) 'ಆ' ಎಂಬ ಪದದ ಮುಂದೆ ಅ, ಆ, ಐ, ಔ ಎಂಬ ಸ್ವರಗಳು ಬಂದರೆ ಸಂಧಿ ಮಾಡಬಾರದು.

ಆ + ಅಂಗಡಿ = ಆ ಅಂಗಡಿ

ಆ + ಔನತ್ಯ = ಆ ಔನ್ನತ್ಯ

ಆ + ಐಶ್ವರ್ಯ = ಆ ಐಶ್ವರ್ಯ

ಆ + ಔದಾರ್ಯ = ಆ ಔದಾರ್ಯ

ಆ + ಆಕಳು = ಆ ಆಕಳು

ಆ + ಐವರು = ಆ ಐವರು ಇತ್ಯಾದಿ

೩) ನಿತ್ಯಸಂಧಿ: ಸಂಧಿ ಮಾಡುವುದು ಕಡ್ಡಾಯವಾಗಿರುವ ಸನ್ನಿವೇಶವನ್ನು 'ನಿತ್ಯಸಂಧಿ' ಎಂದು ಕರೆಯುವರು.

ಕೇಳು + ಉತ್ತ + ಅದೆ = ಕೇಳುತ್ತದೆ.

ಕೇಳು + ಉತ್ತ + ಇದ್ದನು = ಕೇಳುತ್ತಿದ್ದನು.

ಬರು + ಉತ್ತ + ಇದ್ದನು = ಬರುತ್ತಿದ್ದನು

ಕೊನೆ + ಅಲ್ಲಿ = ಕೊನೆಯಲ್ಲಿ

ಕೊನೆ + ಇಂದ = ಕೊನೆಯಿಂದ

ಕಾಡು + ಉತ್ತ = ಕಾಡುತ್ತ

೪) ವಿಕಲ್ಪಸಂಧಿ: ಸಂಧಿ ಮಾಡಿದರೂ ತಪ್ಪಿಲ್ಲ ಮಾಡದಿದ್ದರೂ ತಪ್ಪಿಲ್ಲ ಎನ್ನುವಂತಹ ಸನ್ನಿವೇಶಗಳನ್ನು ವಿಕಲ್ಪಸಂಧಿ ಎಂದು ಕರೆಯುತ್ತಾರೆ.

ಅವನ + ಊರು = ಅವನೂರು - ಅವನ ಊರು

ಆ + ಓಲೆ = ಆವೋಲೆ - ಆ ಓಲೆ

ಧರ್ಮದ + ಯುದ್ಧ = ಧರ್ಮದ್ಯುದ್ಧ - ಧರ್ಮದ ಯುದ್ಧ

ರಾಜ + ಆದೇಶ = ರಾಜಾದೇಶ - ರಾಜ ಆದೇಶ ಇತ್ಯಾದಿ

ದೇವರೇ, ಇವರನ್ನು ಕಾಪಾಡು

ಓಹೋ, ಉಂಗುರ ಸಿಕ್ಕಿತು

ದೇವರೇ + ಇವರನ್ನು

ಓಹೋ + ಉಂಗುರ ಎಂಬ ಕಡೆಗಳಲ್ಲಿ ಸಂಧಿಕಾರ್ಯ ನಡೆದಿಲ್ಲ.

ದೇವರೇ ಇವರನ್ನು, ಓಹೋ ಉಂಗುರ! ಹೀಗೆ ಇಲ್ಲಿ ಸಂಧಿ ಮಾಡಕೂಡದು. ಪದಗಳು ಮೂಲಸ್ಥಿತಿಯಲ್ಲಿ ಹೇಗಿವೆಯೋ ಹಾಗೆಯೇ ಬಿಡಬೇಕು.

ಈ ರೀತಿಯಾಗಿ ಸಂಧಿಕಾರ್ಯವು ನಡೆಯಕೂಡದ ಸಂದರ್ಭಕ್ಕೆ ಪ್ರಕೃತಿಭಾವವೆಂದು ಕರೆಯಲಾಗಿದೆ.

೫. ಯಾರನ್ನಾದರೂ ಹೆಸರು ಹಿಡಿದು ಕರೆಯುವ ಸಂಬೋಧನೆಯ ರೂಪದ ಮುಂದೆ ಸ್ವರವು ಬಂದರೆ ಸಂಧಿಕಾರ್ಯವಾಗುವುದಿಲ್ಲ.

ಉದಾ: ಅಣ್ಣಾ ಇವನು ನನ್ನನ್ನು ಹೆದರಿಸುತ್ತಾನೆ.

ಗೌರಿ ಎಲ್ಲಿ ನನ್ನ ಪುಸ್ತಕ?

೬. ಮನಸ್ಸಿನ ಭಾವವನ್ನು ಸೂಚಿಸುವ ಅಯ್ಯೋ, ಆಹಾ ಮೊದಲಾದ ಅವ್ಯಯಗಳ ಮುಂದೆ ಸ್ವರವು ಬಂದರೆ ಸಂಧಿಕಾರ್ಯವಾಗುವುದಿಲ್ಲ.

ಉದಾ: ಆಹಾ! ಇಲ್ಲಿ ತಣ್ಣಗೆ ಗಾಳಿ ಬೀಸುತ್ತದೆ.

ಅಯ್ಯೋ! ಎಮ್ಮೆಯ ಕರು ತಪ್ಪಿಸಿಕೊಂಡಿದೆಯಲ್ಲ!

ಅಕ್ಕಟಾ! ಇಂದ್ರನಿಗೆ ಕೇಡಾಯಿತು

ಓಹೋ! ಆವ್ಯಕ್ತಿಯೇ ನೀನು

ಅಬ್ಬಾ! ಎಂತಹಾ ವಿಸ್ಮಯ

೭. ಸಂಬಂಧ, ಅವಧಾರಣೆ, ಸಂಶಯ ಮೊದಲಾದುವನ್ನು ಸೂಚಿಸತಕ್ಕ ಊ, ಎ, ಓ, ಮೊದಲಾದ ಅವ್ಯಯಗಳ ಮುಂದೆ ಸ್ವರವು ಬಂದರೆ ಸಂಧಿಕಾರ್ಯವಾಗುವುದಿಲ್ಲ.

ಉದಾ: ಅವನೂ, ಇವನೂ ಎರಡು ಗಂಟೆಗಳಿಂದ ಮಾತನಾಡುತ್ತಿದ್ದಾರೆ.

ಈ ಚಿತ್ರವನ್ನು ರಾಮನೇ ಇರಿಸಿಕೊಂಡನು.

ಇಲ್ಲಿರುವ ಗೋಲಿಗಳೆಷ್ಟು? ಐದೋ ಆರೋ?

ರಾಮ ಹೋಗಿದ್ದಾನೋ, ಆ ಕೆಲಸ ಆದ ಹಾಗೆ ಸರಿ.

ಇತ್ಯಾದಿ ಕಡೆಗಳಲ್ಲಿ ಪ್ರಕೃತಿಭಾವ ಉಂಟಾಗುತ್ತದೆ. ಅದೇ ತೆರನಾಗಿ ಕನ್ನಡ ಸಂಧಿಗಳಂತೆ ಸಂಸ್ಕೃತ ವ್ಯಂಜನ ಸಂಧಿಗಳಲ್ಲಿಯೂ ಪ್ರಕೃತಿಭಾವ ಆಗುವುದನ್ನು ಕಾಣಬಹುದು.

೧. ವರ್ಗದ ಪ್ರಥಮಾಕ್ಷರಕ್ಕೆ ಕರ್ಕಶ ವರ್ಣವು ಪರವಾದರೆ ಅದರ ತೃತೀಯ ವರ್ಣಾದೇಶವಿಲ್ಲ.

೨. ಪೂರ್ವಪದದ ಕೊನೆಯಲ್ಲಿಯ ಸ್ವರ ಅಥವಾ ವ್ಯಂಜನದ ಮುಂದೆ ಉತ್ತರಪದದ ಮೊದಲ ಅಕ್ಷರವು ಯಾವ ವ್ಯಂಜನವಿದ್ದರೂ ಸಂಧಿಪದದಲ್ಲಿ ಯಾವ ಸಂಧಿಕಾರ್ಯವೂ ಆಗುವುದಿಲ್ಲ.

ಅಂದರೆ ವಿಗ್ರಹದಲ್ಲಿಯ ಎಲ್ಲ ಅಕ್ಷರಗಳು ಸಂಧಿಪದದಲ್ಲಿ ಉಳಿಯುತ್ತವೆ.

ಉದಾ: ಬಿಲ್ + ಜಾಣ, ಬಿಲ್ಜಾಣ (ಇಲ್ಲಿ ಸಂಧಿ ಕಾರ್ಯ ನಡೆಯುವುದಿಲ್ಲ)

ಲ್ + ಜ್ = ಲ್ಜಾ

ದಿಕ್ + ಪಾಲ = ದಿಕ್ಪಾಲ

ನಾಲ್ + ದೆಸ = ನಾಲ್ದೆಸೆ

ಇವುಗಳು ಕನ್ನಡ ಮತ್ತು ಸಂಸ್ಕೃತ ಸಂಧಿಗಳಲ್ಲಿ 'ಪ್ರಕೃತಿಭಾವ'ವು ಸಾಮಾನ್ಯವಾಗಿ ಹಲವು ಕಡೆಗಳಲ್ಲಿ ಸಂಧಿಕಾರ್ಯ ನಡೆಯದೇ ಇರುವುದನ್ನು ಕಂಡುಬರುತ್ತದೆ. ಈ ತೆರನಾಗಿ ಕನ್ನಡ ವ್ಯಾಕರಣದಲ್ಲಿ ಕನ್ನಡ ಸಂಧಿ ಸ್ವರೂಪವನ್ನು ಪಡೆದುಕೊಂಡಿದೆ.

**ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಕನ್ನಡ ಸಂಧಿ ವಿವೇಚನೆ**

ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ "ಆಧುನಿಕರು ಹೇಳುವಂತೆ 'ಸಂಧಿ' ಎನ್ನುವುದು ಧ್ವನಿಮಾಶಾಸ್ತ್ರ ಮತ್ತು ಆಕೃತಿಮಾಶಾಸ್ತ್ರಗಳ ನಡುವಿನ ಸೇತುವೆ" ಎಂಬುವುದಾಗಿ ಹೇಳುತ್ತಾರೆ. ಆಕೃತಿಮಾ ಬದ್ಧ ರಚನೆಯಲ್ಲಿ ನಡೆಯುವ ಹೊಂದಾಣಿಕ ಮತ್ತು ಧ್ವನಿ ಬದಲಾವಣೆಯೇ ಸಂಧಿಯಾಗುವುದು.

ಎರಡು ಪ್ರಕಾರಗಳ ಆಕೃತಿಮಾಗಳ ಕೂಡುವಿಕೆಯೇ 'ಸಂಧಿ' ಎನಿಸುತ್ತದೆ.

ಉದಾ: ಮುಕ್ತ ಆಕೃತಿಮಾ + ಮುಕ್ತ ಆಕೃತಿಮಾ = ಸಂಧಿ

ಮುಕ್ತ ಆಕೃತಿಮಾ + ಬದ್ಧ ಆಕೃತಿಮಾ = ಸಂಧಿ

ಎರಡು ಧ್ವನಿಮಾಗಳ ನಡುವೆ ಸಂಧಿಕ್ರಿಯೆ ನಡೆಯುತ್ತದೆಯೇ ಹೊರತು ಎರಡು ಶಬ್ದಗಳ ಮಧ್ಯೆ ನಡೆಯುವುದಿಲ್ಲ ಎಂದು ಆಧುನಿಕ ವಿದ್ವಾಂಸರು ಗಟ್ಟಿಯಾಗಿ ಪ್ರತಿಪಾದಿಸಿದರು.

ಸಾಂಪ್ರದಾಯಿಕರು ಅದರಲ್ಲೂ ಕನ್ನಡದ ಆಧ್ಯವ್ಯಾಕರಣಕಾರನಾದ ಕೇಶೀರಾಜ ತನ್ನ ಶಬ್ಧಮಣಿದರ್ಪಣದಲ್ಲಿ ಈ ರೀತಿಯಾಗಿ ಹೇಳುತ್ತಾರೆ.

'ಎರಡುಂ ಪಲವುಂ ವರ್ಣ೦
ಪರಸ್ಪರ ಕೂಡುವಂದಮದೆ ಸಂಧಿವಲಂ
ಸ್ವರರಹಿತ ವ್ಯಂಜನಮವು
ಪರವರ್ಣಮನೆಯ್ದು ತಿರ್ಪುವಾ ಸಂಹಿತೆಯೊಳ್'

ಎರಡು ಇಲ್ಲವೆ ಹಲವು ವರ್ಣಗಳು (ಅಕ್ಷರಗಳು) ಪರಸ್ಪರ ಕೂಡುವ ರೀತಿಯೇ ಸಂಧಿ. ಆ ಸಂಧಿಯಲ್ಲಿ ಸ್ವರ ರಹಿತ ವ್ಯಂಜನಗಳು ಮುಂದಿನ ವರ್ಣದೊಂದಿಗೆ ಸೇರಿಯಾಗುವ ವಿಧಾನವನ್ನು ಸಂಧಿಕ್ರಿಯೆ ಎನ್ನುತ್ತಾರೆ.

ಆದರೆ ಕೇಶೀರಾಜನ ವ್ಯಾಖ್ಯಾನದಲ್ಲಿ ನಮಗೆ ಅರ್ಥದ ಬಗ್ಗೆ ಮೊದಲು ಸಮಸ್ಯೆಯು ತಲೆದೂರುತ್ತದೆ. ಅದೇನೆಂದರೆ ಒಂದು ವರ್ಣಕ್ಕೆ ಮತ್ತೊಂದು ವರ್ಣವು ಪೂರ್ವ ಮತ್ತು ಉತ್ತರದಲ್ಲಿ ಸೇರಿ ಸಂಧಿಯಾಗುವುದು ಸಹಜವಾಗಿದೆ. ಆದರೆ ಕೇಶೀರಾಜನ ವ್ಯಾಖ್ಯಾನದಲ್ಲಿ 'ಎರಡುಂ ಫಲವುಂ ವರ್ಣಂ' ಎಂದಾಕ್ಷಣ ನಮಗೆ ಸಮಸ್ಯೆ ಎದುರಾಗುತ್ತದೆ. ಎರಡು ಅಕ್ಷರಗಳು ಸೇರಬಹುದು. ಆದರೆ ಹಲವು ಅಕ್ಷರಗಳು ಸೇರಲು ಸಾಧ್ಯವಿಲ್ಲ ಎಂದು ನಮಗೆ ತಿಳಿಯುತ್ತದೆ. ಇದು ಪಾರಂಪರಿಕದಲ್ಲಿ ಕಂಡುಬರುವ ಸಂಧಿಯ ಪ್ರಥಮ ಸಮಸ್ಯೆಯಾಗಿದೆ.

ಅದೇನೆ ಇರಲಿ ಪಾರಂಪರಿಕರು ಮುಂದುವರೆದು ಶಬ್ದ, ಶಬ್ದಗಳ ನಡುವೆ ಸಂಧಿ ಜರುಗುವುದೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಆಧುನೀಕರು ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಆಕೃತಿಮಾ, ಆಕೃತಿಮಾಗಳ ನಡುವೆ ಸಂಧಿ ಜರುಗುವುದು ಎನ್ನುತ್ತಾರೆ.

ಸಂಧಿ ಜರುಗುವುದು ಎರಡು ಅಕ್ಷರಗಳ ನಡುವೆ ಮಾತ್ರ ಎರಡು ಮುಕ್ತ ಆಕೃತಿಮಾಗಳ ಅಥವಾ ಒಂದು ಮುಕ್ತ ಆಕೃತಿಮಾ ಮತ್ತೊಂದು ಬದ್ಧ ಆಕೃತಿಮಾಗಳ ನಡುವೆ ಸಂಧಿಕಾರ್ಯ ನಡೆಯುತ್ತದೆ.

ಉದಾ: ಧ್ವನಿಮಾಶಾಸ್ತ್ರ + ಆಕೃತಿಮಾಶಾಸ್ತ್ರ = ಸಂಧಿಕ್ರಿಯೆ
ಮುಕ್ತ ಆಕೃತಿಮಾ + ಬದ್ಧ ಆಕೃತಿಮಾ = ಸಂಧಿಪದ (ಸಮಸ್ತಪದ)
ಕಣ್ಣು + ಗಳು = ಕಣ್ಣುಗಳು
ಮಗು + ಕಳ್ = ಮಕ್ಕಳು
ತಮ್ಮ + ಅಂದಿರ್ = ತಮ್ಮಂದಿರ್

ಸ್ವರವಿಲ್ಲದೆ ಸಂಧಿಯಿಲ್ಲ, ಎರಡು ವ್ಯಂಜನಗಳ ನಡುವೆ ಸಂಧಿ ನಡೆಯುವುದಿಲ್ಲ.

ಉದಾ: ಸ್ವರ + ಸ್ವರ = ಸ್ವರಸಂಧಿ
ವ್ಯಂಜನ + ಸ್ವರ = ವ್ಯಂಜನಸಂಧಿ

ಈ ಎರಡು ಪ್ರಕಾರಗಳಲ್ಲಿ ಪ್ರಧಾನವಾಗಿ ಸಂಧಿಕಾರ್ಯ ನಡೆಯುತ್ತದೆ.

**ಸಂಧಿಯ ಪ್ರಕಾರಗಳು**

ಸಂಧಿಗಳು ನಡೆಯುವ ಸ್ಥಾನದ ಆಧಾರದ ಮೇಲೆ ಅದರ ಪ್ರಕಾರಗಳು ಪ್ರಮುಖವಾಗಿ ೨ ಪ್ರಕಾರಗಳಾಗಿ ವಿಭಾಗಿಸಲಾಗಿದೆ. ಈ ಮೊದಲು ಸಂಧಿಗಳು ಹೊಂದಿರುವ ಅಕ್ಷರಗಳ ಆಧಾರದ ಮೇಲೆ ಸ್ವರ ವ್ಯಂಜನ ಎಂದು ವರ್ಗೀಕರಿಸಲಾಗಿದೆ. ಆದರೆ ಇಲ್ಲಿ ಸಂಧಿಗಳು ನಡೆಯುವ ಆಧಾರದ ಮೇಲೆ ಅಂದರೆ ಅವುಗಳ ಸ್ಥಾನದ ಮೇಲೆ ಎರಡು ಪ್ರಕಾರಗಳಿಂದ

ಅವುಗಳೆಂದರೆ–

೧. ಪದ ಮಧ್ಯ ಸಂಧಿ (ಅಂತರ್ ಸಂಧಿ)

೨. ಪದಾಂತ್ಯ ಸಂಧಿ (ಬಹಿರ್ ಸಂಧಿ) ಎಂದು ಎರಡು ಪ್ರಕಾರಗಳಲ್ಲಿ ವಿಭಾಗಿಸಲಾಗಿದೆ.

೧. ಪದಮಧ್ಯ ಸಂಧಿ ಅಥವಾ ಅಂತರ್ ಸಂಧಿ ಎಂದರೆ ಒಂದು ಆಕೃತಿಯಾದ ಸೀಮೆಯ (ವ್ಯಾಪ್ತಿ) ಒಳಗಡೆಯೇ ನಡೆಯುವ ಧ್ವನಿ ಬದಲಾವಣೆಯೇ ಅಂತರ್ ಸಂಧಿಯಾಗಿದೆ.

೨. ಪದಾಂತ್ಯ ಸಂಧಿ ಅಥವಾ ಬಹಿರ್ ಸಂಧಿ ಎಂದರೆ ಒಂದು ಆಕೃತಿಯಾದ ಸೀಮೆಯ ಹೊರಗಡೆ ನಡೆಯುವ ಧ್ವನಿ ಬದಲಾವಣೆಯೇ ಬಹಿರ್ ಅಥವಾ ಪದಾಂತ್ಯ ಸಂಧಿ ಎನ್ನುತ್ತೇವೆ.

ಈ ಪ್ರಕಾರದ ಸಂಧಿಗಳನ್ನು ಅದರಲ್ಲಿರುವ ಇತರೆ ಒಳ ಪ್ರಕಾರಗಳನ್ನು ಇನ್ನೂ ಸ್ಥೂಲವಾಗಿ ತಿಳಿಯಲು ರೇಖಾಚಿತ್ರದ ಮೂಲಕವಾಗಿ ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗುತ್ತದೆ.

ಸಂಧಿಯ ರೇಖಾಚಿತ್ರ



ಸಂಸ್ಕೃತ ವ್ಯಾಕರಣದಲ್ಲಿ 'ಪದಮಧ್ಯ ಸಂಧಿ' ಮತ್ತು 'ಪದಾಂತ್ಯ ಸಂಧಿ' ಎಂಬುದಾಗಿ ಸಂಧಿ ನಿಯಮಗಳನ್ನು ಎರಡು ಗುಂಪುಗಳಲ್ಲಿ ವಿಂಗಡಿಸಲಾಗಿದೆ.

ಎರಡು ಪದ ಇಲ್ಲವೆ ಪದರೂಪಗಳು ವಾಕ್ಯದಲ್ಲಿ ಒಂದರ ಅನಂತರ ಒಂದರಂತೆ ಬಂದಾಗ ಅವುಗಳಲ್ಲಿ ನಡೆಯುವ ಬದಲಾವಣೆಗಳು ಪದಾಂತ್ಯ ಸಂಧಿಗಳು. ನಿಜಕ್ಕೂ ಇವು ಪದದ ಕೊನೆಯಲ್ಲಿ ಮಾತ್ರವಲ್ಲದೆ ಪದದ ಮೊದಲಲ್ಲೂ ನಡೆಯಬಲ್ಲವು. ಪದಕ್ಕೆ ಪದವನ್ನು ಸೇರಿಸಿ ಬೇರೊಂದು ಪದವನ್ನು ತಯಾರಿಸುವಲ್ಲಿ ಇಲ್ಲವೇ ಪದಕ್ಕೆ ಪ್ರತ್ಯಯವನ್ನು ಸೇರಿಸಿ ಪದರೂಪವನ್ನು ಇಲ್ಲವೇ ಬೇರೊಂದು ಪದವನ್ನು ತಯಾರಿಸುವಲ್ಲಿ ನಡೆಯುವ ಬದಲಾವಣೆಗಳು ಪದಮಧ್ಯ ಸಂಧಿಗಳು. ಸಂಸ್ಕೃತದ ಪದಮಧ್ಯ ಸಂಧಿ ನಿಯಮಗಳಲ್ಲಿ ಹೆಚ್ಚಿನವೂ ಪದಾಂತ್ಯ ಸಂಧಿ ನಿಯಮಗಳ ಹಾಗೆಯೇ ಇವೆ. ಆದರೆ ಕೆಲವು ನಿಯಮಗಳು ಇವೆರಡರಲ್ಲಿ ಬೇರೆ ಬೇರೆಯಾಗಿವೆ. ಉದಾಹರಣೆಗಾಗಿ 'ರ'ಕಾರ ಇಲ್ಲವೇ 'ವ'ಕಾರದಲ್ಲಿ ಕೊನೆಗೊಳ್ಳುವ ಕೆಲವು ಧಾತುಗಳಿಗೆ ವ್ಯಂಜನದಲ್ಲಿ ಸುರುವಾಗುವ ಪ್ರತ್ಯಯವೊಂದು ಸೇರಿದಾಗ ಆ ಧಾತುವು ಕೊನೆಯ ವ್ಯಂಜನದ ಹಿಂದಿರುವ 'ಇ'ಕಾರ ಮತ್ತು 'ಉ'ಕಾರಗಳು ದೀರ್ಘಸ್ವರಗಳಾಗುತ್ತವೆ. (ದಿವ್ + ಯಾಮಿ = ದೀವ್ಯಾಮಿ, ಗಿರ್ + ಬಿಃ = ಗೀರ್ಭಿ, ಪುರ್ + ಭಿಃ = ಪೂರ್ಭೀಃ) ಇದು ಸಂಸ್ಕೃತದ ಪದ ಮಧ್ಯ ಸಂಧಿ ನಿಯಮ. ಪದಾಂತ್ಯ ಸಂಧಿಯಲ್ಲಿ ಇಂತಹ ನಿಯಮವಿಲ್ಲ.

ಪದಗಳ ಕೊನೆಯ ಕ,ಟ,ತ,ಪ,ಗಳು ಅವುಗಳ ಅನಂತರ ಸ್ವರ ಬಂದಾಗ ಗ,ಡ,ದ,ಬ, ಗಳಾಗುತ್ತವೆ. (ಸಮ್ಯಕ್ + ಉಕ್ತಂ = ಸಮ್ಯಗುಕ್ತಂ, ತತ್ + ಅರ್ಹತಿ = ತದರ್ಹತಿ) ಎಂಬುದು ಒಂದು ಪದ, ಪದಾಂತ್ಯ ಸಂಧಿಯ ನಿಯಮ. ಆದರೆ ಪದಮಧ್ಯ ಸಂಧಿಯಲ್ಲಿ ಕ,ಚ,ಟ,ಪ, ಗಳು ಸಾಮಾನ್ಯವಾಗಿ ಹಾಗೆಯೇ ಉಳಿಯುತ್ತವೆ. (ಸರ್ವಶಕ್ + ಅಂ = ಸರ್ವಶಕಂ, ಮರುತ್ + ಆ = ಮರುತಾ) ಹಳೆಗನ್ನಡದಲ್ಲೂ ಪದಮದ್ಯ ಮತ್ತು ಪದಾಂತ್ಯ ಸಂಧಿಗಳ ನಡುವೆ ಇಂತಹ ಕೆಲವು ವ್ಯತ್ಯಾಸಗಳಿವೆ. ಇದಲ್ಲದೆ ಈ ಎರಡು ರೀತಿಯ ಸಂಧಿನಿಯಮಗಳೂ ಹಲವು ವಿಷಯಗಳಲ್ಲಿ ಸಂಸ್ಕೃತದ ಪದಮಧ್ಯ ಮತ್ತು ಪದಾಂತ್ಯ ಸಂಧಿಗಳಿಂದ ಭಿನ್ನವಾಗಿದೆ.

ಉದಾಹರಣೆಗಾಗಿ ಹಳೆಗನ್ನಡದ ಕೆಲವು ಧಾತುಗಳಿಗೆ ವ್ಯಂಜನದಲ್ಲಿ ಸುರುವಾಗುವ ಪ್ರತ್ಯಯಗಳನ್ನು ಸೇರಿಸಿದಾಗ ಅವುಗಳ ಉದ್ದಸ್ವರ ಗಿಡ್ಡವಾಗಿರುತ್ತದೆ. (ಕಾಣ್ + ದ್ + ಅನ್ = ಕಂಡನ್, ಬೀಟ್ + ದ್ + ಅಳ್ = ಬಿಟ್ಟಳ್, ಏಟ್ + ದ್ + ಅ = ಎಟ್ಟ) ಪೇರಾನೆ– ಪೆರ್ದೆರೆ, ಮಾರ್ವಲ – ಮೊದಲಾದವುಗಳಲ್ಲಿರುವ ಎಣಿಕೆಯ ಪದಗಳ ಬಳಕೆಯಲ್ಲೂ ಇಂತಹದೇ ಬದಲಾವಣೆಯನ್ನು ಕಾಣಬಹುದು. ಆದರೆ ಮೇಲೆ ಕೊಟ್ಟಿರುವ ಗಿಡ್ಡ ಸ್ವರ

ಉದ್ದವಾಗುವ ಸಂಸ್ಕೃತದ ಪದಮಧ್ಯ ಸಂಧಿ ನಿಯಮಕ್ಕಿಂತ ಹಳೆಗನ್ನಡದ ಈ ಬದಲಾವಣೆ ತೀರ ಭಿನ್ನವಾಗಿದೆ. ಹಳೆಗನ್ನಡದಲ್ಲಿ ಈ ಉದ್ದಸ್ವರ ಗಿಡ್ಡಸ್ವರವಾಗುವ ನಿಯಮ ಪದಮಧ್ಯ ಸಂಧಿಯಲ್ಲಿ ಮಾತ್ರವೇ ಕಾಣಲು ಸಾಧ್ಯವಿದೆ.

ಕೇಶಿರಾಜನು (ಸೂ.೬೦)ರಲ್ಲಿ ಪದಮಧ್ಯ ಮತ್ತು ಪದಾಂತ್ಯ ಎಂಬುದಾಗಿ ಎರಡು ರೀತಿಯ ಸಂಧಿಗಳಿವೆ ಎಂದು ಹೇಳಿದ್ದಾನೆ. ಆದರೆ ಅನಂತರ ಹಳೆಗನ್ನಡದಲ್ಲಿ ಸಂಧಿ ನಿಯಮಗಳನ್ನು ವಿವರಿಸುವಾಗ ಎಲ್ಲಿಯೂ ಈ ವಿಭಜನೆಯನ್ನು ಬಳಸಿಕೊಂಡಿರುವ ಹಾಗೆ ಕಾಣಿಸುವುದಿಲ್ಲ.

ಸಂಧಿ ನಿಯಮಗಳಿಗೆ ಉದಾಹರಣೆಗಳನ್ನು ಕೊಡುವಾಗ ಕೆಲವು ಕಡೆಗಳಲ್ಲಿ ಪದಮಧ್ಯ ಸಂಧಿಯಾಗಿರುವವುಗಳನ್ನು (ತೋಯಲುಂ, ನೋಯಿಸಿದಂ) ಕೊಟ್ಟರೆ ಇನ್ನು ಕೆಲವು ಕಡೆಗಳಲ್ಲಿ ಪದಾಂತ್ಯ ಸಂಧಿಯಾಗಿರುವವುಗಳನ್ನು (ಜೋಯೆಂದು, ಸ್ತ್ರೀಯೆಂಬ) ಕೊಟ್ಟಿದ್ದಾನೆ.

ಈ ಪ್ರಕಾರವಾಗಿ ಸಂಸ್ಕೃತ ಭೂ ಇಷ್ಟವಾದ ಕನ್ನಡದ ಮೊದಲ ವ್ಯಾಕರಣವಾದ, ಕೇಶೀರಾಜನ ಶಬ್ದಮಣಿದರ್ಪಣದಲ್ಲಿ ಕನ್ನಡದ ಪಾರಂಪರಿಕವಾಗಿ ವಿಭಾಗಿಸಿಕೊಂಡ ಪದಮಧ್ಯ ಮತ್ತು ಪದಾಂತ್ಯ ಸಂಧಿಗಳ ಸ್ವರೂಪವನ್ನು ಕಾಣುತ್ತೇವೆ.

**ಪದಮಧ್ಯ ಮತ್ತು ಪದಾಂತ್ಯ ಸಂಧಿಗಳು**

ರೂಢಿಗತ ಹೊಸಗನ್ನಡ ವ್ಯಾಕರಣಗಳಲ್ಲಿ ಪದಮಧ್ಯ ಮತ್ತು ಪದಾಂತ್ಯ ಸಂಧಿಗಳೆಂಬ ಎರಡು ತೆರನಾದ ಸಂಧಿಗಳನ್ನು ವಿವರಿಸಿರುವುದುಂಟು. ಪ್ರಕೃತಿಗೆ (ನಾಮ, ಕ್ರಿಯೆ) ಪ್ರತ್ಯಯ ಕೂಡಿ ಸಂಧಿಯಾಗುವುದು ಪದಮಧ್ಯ ಸಂಧಿಯೆಂದು (ಮಾತು + ಅನ್ನು = ಮಾತನ್ನು) ಮಾಡಿದ + ಎವು = ಮಾಡಿದೆವು) ಪದಕ್ಕೆ ಪದ (ಪ್ರಕೃತಿಗೆ ಪ್ರಕೃತಿ ಸಹ) ಕೂಡಿ ಸಂಧಿಯಾಗುವುದು ಪದಾಂತ್ಯ ಸಂಧಿಯೆಂದು (ಆಕಾಶದ + ಎತ್ತರಕ್ಕೆ = ಆಕಾಶದೆತ್ತರಕ್ಕೆ, ಮಳೆ + ಕಾಲ = ಮಳೆಗಾಲ) ಹೇಳಿದೆ. ಮೊದಲನೆಯದು ಪದದ ಅಂತರಾಳದಲ್ಲಿ ನಡೆಯುವ ಸಂಧಿ, ಎರಡನೆಯದು ಬೇರೆ ಬೇರೆ ಪದಗಳ ನಡುವೆ ನಡೆಯುವ ಸಂಧಿ. ಇವು ಸಂಸ್ಕೃತ ವ್ಯಾಕರಣದ ಪ್ರಕ್ರಿಯೆಗಳು; ಅಲ್ಲಿ ಎರಡು ಭಿನ್ನ ಸಂದರ್ಭಗಳಲ್ಲಿಯೂ ಸಮಾನವಾದ ಎರಡು ಅಕ್ಷರಗಳು ಭಿನ್ನ ರೀತಿಗಳಲ್ಲಿ ಕೂಡುತ್ತವೆ. (ಅತ್ರ + ಅರಣ್ಯೇ = ಅತ್ರಾರಣ್ಯೆ ; ರಾಮ + ಅಮ್ = ರಾಮಮ್) ಕನ್ನಡದಲ್ಲಿ ಹಾಗಿಲ್ಲ. ಆದರೂ ಸೌಕರ್ಯಕ್ಕಾಗಿ ಈ ಪ್ರಕ್ರಿಯೆಗಳನ್ನು ಬಳಸುವುದರಲ್ಲಿ ಪ್ರಯೋಜನವಿದೆ.

ಪದಮಧ್ಯ ಸಂಧಿ ನಿತ್ಯ; ಎಂದರೆ ಪ್ರಕೃತಿ ಪ್ರತ್ಯಯಗಳನ್ನು ಸಂಧಿ ಮಾಡಿಯೇ ಪ್ರಯೋಗಿಸಬೇಕಲ್ಲದೆ, ಬಿಡಿಸಿ ಅಲ್ಲ. ಆದರೆ ಪದಕ್ಕೆ ಪದ (ಪ್ರಕೃತಿಗೆ ಪ್ರಕೃತಿ) ಸೇರುವ ಪದಾಂತ್ಯ ಸಂಧಿ ನಿತ್ಯವಲ್ಲ. ಐಚ್ಛಿಕ; ಎಂದರೆ ಪದಗಳನ್ನು ಕೂಡಿಸಿ ಇಲ್ಲವೆ ಬಿಡಿಸಿ ಬಳಸಬಹುದು. ("ಮಾತು ಅನ್ನು" ಎಂದು ಹೇಳಬಾರದು; ಮಾತನ್ನು ಎನ್ನಬೇಕು. 'ಅರಸನಾಸೆ', 'ಅರಸನ ಆಸೆ' ಎರಡೂ ಆಗಬಹುದು) ಆದರೆ ಸಮಾಸದಲ್ಲಿ ಮಾತ್ರ ಪದಾಂತ್ಯ ಸಂಧಿ ಬಲುಮಟ್ಟಿಗೆ ನಿತ್ಯವೇ. ('ಕೈ ಬಳೆ', 'ಮಳೆ ಕಾಲ' ಎಂಬುದು 'ಕೈಬಳೆ', 'ಮಳೆಗಾಲ' ಎಂದು ಸೇರಿಯೇ ನುಡಿಯಬೇಕು) ಈ ಪ್ರಕಾರವಾಗಿ ಪದಮಧ್ಯ ಮತ್ತು ಪದಾಂತ್ಯ ಸಂಧಿಗಳ ಕಾರ್ಯವನ್ನು ಮನಗಾಣಲಾಗಿದೆ.

ಈ ಹಿಂದೆ ರೇಖಾಚಿತ್ರದಲ್ಲಿ ವರ್ಗೀಕರಿಸಲಾದ ಎಲ್ಲಾ ಪ್ರಕಾರದ ಸಂಧಿಗಳನ್ನು ಯಾವ ಯಾವ ನೆಲೆಯಲ್ಲಿ ಸಂಧಿಗಳು ಯಾವ ತೆರನಾಗಿ ನಡೆಯುತ್ತವೆ ಎಂಬುದನ್ನು ಉದಾಹರಣೆ ಸಮೇತವಾಗಿ ಈ ಮುಂದಿನ ಪುಟಗಳಲ್ಲಿ ವಿವರಿಸಲಾಗಿದೆ.

**೧. ಪದಮಧ್ಯ ಸಂಧಿ**

ಒಂದು ಆಕೃತಿಮಾದ ಒಳಗಡೆಯೇ ನಡೆಯುವ ಧ್ವನಿ ಬದಲಾವಣೆಯೇ ಪದಮಧ್ಯ ಸಂಧಿ ಅಥವಾ ಅಂತಃ ಸಂಧಿ ಎಂದು ಕರೆಯುತ್ತಾರೆ. ಎಲ್ಲಿ ಮುಖ್ಯಾರ್ಥವು ಆಕೃತಿಮಾದ ಸೀಮೆಯ ಒಳಗಿರುತ್ತದೆಯೋ ಅದು ಪದಮಧ್ಯ ಸಂಧಿ ಅಥವಾ ಅಂತಃ ಸಂಧಿಯಾಗುತ್ತದೆ. ಎರಡು ಆಕೃತಿಮಾಗಳಿರುತ್ತದೆ. ಒಂದು ಸ್ವತಂತ್ರ್ಯ ಆಕೃತಿಮಾ ಇನ್ನೊಂದು ಬದ್ಧ ಆಕೃತಿಮಾಗಳಿರುತ್ತವೆ. ಇವುಗಳಲ್ಲಿ ಸ್ವತಂತ್ರ್ಯ ಆಕೃತಿಮಾದ ಒಳಗೆ ಧ್ವನಿ ಬದಲಾವಣೆ ಉಂಟಾದರೆ ಅದು ಪದ ಮಧ್ಯ ಸಂಧಿಯಾಗುತ್ತದೆ. ಪದಮಧ್ಯ ಸಂಧಿಗಳಲ್ಲಿ ೨ ಪ್ರಕಾರಗಳಿವೆ. ಅವುಗಳೆಂದರೆ–

**ಅ. ಸರ್ವನಾಮಗಳಿಗೆ ಸಂಬಂಧಿಸಿದ ಸಂಧಿಗಳು:**

ಸರ್ವನಾಮಗಳು: ಇದಂ, ಅದಂ, ಅವನು, ಇವನು, ಅವಳು, ಇವಳು, ನಾನು, ನೀನು, ಯಾರು, ನೀವು, ನಾವು, ಇತ್ಯಾದಿಗಳು.

ನಿಯಮ: 'ಸ್ವರದಿಂದ ಆರಂಭವಾಗುವ ಉತ್ತರ ಪದದಲ್ಲಿ ವಿಭಕ್ತಿ ಪ್ರತ್ಯಯವು ಎದುರಾದರೆ, ಸರ್ವನಾಮದ ಅಂತ್ಯ ವ್ಯಂಜನವು ದ್ವಿತ್ವವಾಗುತ್ತದೆ.

ಉದಾ: ನಾನ್ + ಅ = ನನ್ನ

ತಾನ್ + ಅ = ತನ್ನ

ತಾವ್ + ಅ = ತಮ್ಮ

ನೀವ್ + ಅ = ನಿಮ್ಮ

ನೀನ್ + ಅ = ನಿನ್ನ

ಈ ಮೇಲಿನ ಉದಾಹರಣೆಗಳಲ್ಲಿ ಸರ್ವನಾಮಗಳ ಪ್ರಥಮಾಕ್ಷರಕ್ಕೆ ಲೋಪ ಉಂಟಾಗಿ ಮತ್ತು ದ್ವಿತೀಯಾಕ್ಷರವು ಕೆಲವು ಸಜಾತಿಯ ದ್ವಿತ್ವದಿಂದ ಕೂಡಿದೆ.

**ಆ. ಕ್ರಿಯಾಪದಗಳಿಗೆ ಸಂಬಂಧಿಸಿದ ಸಂಧಿಗಳು:**

ಕಾಲವಾಚಕ, ಪುರುಷವಾಚಕ, ಲಿಂಗ, ವಚನ, ಕ್ರಿಯಾ ಸೂಚಕಗಳನ್ನು ಪಡೆದುಕೊಂಡಾಗ ಸಂಧಿಕ್ರಿಯೆ ನಡೆಯುತ್ತದೆ.

ಧಾತು + ಕಾಲಸೂಚಕ ಪ್ರತ್ಯಯ + ಲಿಂಗ + ವಚನ = ಕ್ರಿಯಾಪದ

ತಿನ್ + ಉತ್ + ಆಳೆ = ತಿನ್ನುತ್ತಾಳೆ

ಬರ್ + ಉತ್ + ಅದೆ = ಬರುತ್ತದೆ

ಹೋಗ್ + ಉತ್ + ಆನೆ = ಹೋಗುತ್ತಾನೆ

ಬರ್ + ಉತ್ + ಆನೆ = ಬರುತ್ತಾನೆ

ತಿನ್ + ದ್ + ಇತು = ತಿಂದಿತು 

ಬನ್ + ದ್ + ಇತು = ಬಂದಿತು

ಗೆಲ್ + ದ್ + ಅನು = ಗೆದ್ದನು

ನೋಡ್ + ದ್ + ಅನು = ನೋಡಿದನು

ಮೇಲ್ + ದ್ + ಅನು = ಮೇಲ್ದನು

**೨. ಪದಾಂತ್ಯ ಸಂಧಿ:**

ಮುಕ್ತ ಆಕೃತಿಮಾ + ಬದ್ಧ ಆಕೃತಿಮಾಗಳ ಸೇರ್ಪಡೆಯೇ ಪದಾಂತ್ಯ ಸಂಧಿ ಅಥವಾ ಬಹಿರ್ ಸಂಧಿಯಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಪೂರ್ವಪದದ ಸೀಮೆಯ ಹೊರಗಡೆ ಧ್ವನಿ ಬದಲಾವಣೆಯಾಗಿ ಸಂಧಿಯಾಗುತ್ತದೆ. ಪದಾಂತ್ಯ ಸಂಧಿಯಲ್ಲಿ ಎರಡು ಪ್ರಕಾರಗಳಿವೆ. ಅವುಗಳೆಂದರೆ–

**ಅ. ಪ್ರತ್ಯಯಕ ಸಂಧಿ**

ಪ್ರತ್ಯಯಕ ಸಂಧಿಯಲ್ಲಿ ೩ ಪ್ರಕಾರಗಳು.

೧. **'ಯ'ಕಾರಾಗಮ ಸಂಧಿ:** ಪೂರ್ವಪದದಿಂದ ಅಂತ್ಯವಾಗುವ ಸ್ವತಂತ್ರ ಆಕೃತಿಮಾದ

ಮುಂದೆ ಸ್ವರದಿಂದ ಆರಂಭವಾಗುವ ಬದ್ಧ ಆಕೃತಿಮಾ ಎದುರಾದರೆ ಅಲ್ಲಿ 'ಯ' ಕಾರಾಗಮವಾಗುತ್ತದೆ.

ಉದಾ: ಮಡಿ + ಇಂದ = ಮಡಿಯಿಂದ

ತಲೆ + ಇಲ್ಲಿ = ತಲೆಯಲ್ಲಿ

ಮೇ + ಇಸು = ಮೇಯಿಸು ಇತ್ಯಾದಿ.

೨. 'ವ'ಕಾರಾಗಮ ಸಂಧಿ: ಪಶ್ಚ್ಯ ಅಥವಾ ಮಧ್ಯ ಸ್ವರದಿಂದ ಕೊನೆಗೊಳ್ಳುವ ಸ್ವತಂತ್ರ ಆಕೃತಿಮಾದ ಮುಂದೆ 'ಅ' ಇಲ್ಲವೆ 'ಇ' ಸ್ವರದಿಂದ ಆರಂಭವಾಗುವ ಬದ್ಧ ಆಕೃತಿಮಾ ಎದುರಾದರೆ ಅಲ್ಲಿ 'ವ'ಕಾರಾಗಮವಾಗುತ್ತದೆ.

ಉದಾ: ಕರು + ಅನ್ನು = ಕರುವನ್ನು

ಬಲ + ಅನ್ನು = ಬಲವನ್ನು

ತನು + ಇದೆ = ತನುವಿದೆ

ಮನ + ಇಗೆ = ಮನುವಿಗೆ

೩ . 'ಇನ್' ಆಗಮಸಂಧಿ (ಇನಾಗಮಸಂಧಿ): ಅಮಹತ್ ವ್ಯಂಜನಾಂತ್ಯ ಆಕೃತಿಮಾಕ್ಕೆ 'ಅ' ಮತ್ತು 'ಇ' ಸ್ವರದಿಂದ ಆರಂಭವಾಗುವ ಬದ್ಧ ಆಕೃತಿಮಾಗಳು ಎದುರಾದರೆ ಅಲ್ಲಿ 'ಇನ್' ಆಗಮವಾಗುತ್ತದೆ.

ಉದಾ: ಕಾಲ್ + ಇಂದ = ಕಾಲಿನಿಂದ

ಕಾರ್ + ಅಲ್ಲಿ = ಕಾರಿನಲ್ಲಿ

ಮಣ್ + ಇಂದ = ಮಣ್ಣಿಂದ

**ಆ. ಪ್ರತ್ಯಯೇತರ ಸಂಧಿ:**

ಪ್ರತ್ಯಯೇತರ ಸಂಧಿಗಳಲ್ಲಿ ಮತ್ತೆ ಎರಡು ಪ್ರಕಾರಗಳಿವೆ. ಅವುಗಳು ೧. ಸ್ವರ ಸಂಧಿಗಳು ೨. ವ್ಯಂಜನಸಂಧಿಗಳು.

**ಸ್ವರ ಸಂಧಿಗಳಲ್ಲಿ ಮೂರು ಪ್ರಕಾರಗಳಿವೆ. ಅವುಗಳೆಂದರೆ**

೧. ಲೋಪಸಂಧಿ, ೨. ಯಕಾರಾಗಮಸಂಧಿ ೩. ವಕಾರಾಗಮಸಂಧಿ.

**೧. ಲೋಪಸಂಧಿ:** ಪೂರ್ವಪದದ ಅಂತ್ಯ ಸ್ವರದ ಮುಂದೆ, ಸ್ವರದಿಂದ ಆರಂಭವಾಗುವ ಪದವು ಎದುರಾದರೆ ಪೂರ್ವಪದದ ಅಂತ್ಯಸ್ವರಕ್ಕೆ ಲೋಪವಾಗುತ್ತದೆ.

ಉದಾ: ಕಣ್ಣು + ಇದೆ = ಕಣ್ಣಿದೆ

ಹಾರು + ಆಟ = ಹಾರಾಟ

ಮುಂದೆ + ಇದ್ದರು = ಮುಂದಿದ್ದರು

ನಿನಗೆ + ಒಂದು = ನಿನಗೊಂದು

ಓಡಿ + ಓಡಿ = ಓಡೋಡಿ ಇತ್ಯಾದಿ

೨. **'ಯ'ಕಾರಾಗಮಸಂಧಿ:** ಪೂರ್ವ ಸ್ವರದಿಂದ ಅಂತ್ಯಗೊಳ್ಳುವ ಪದಕ್ಕೆ ಪಶ್ಚಸ್ವರದಿಂದ ಆರಂಭವಾದ ಪದವು ಎದುರಾದರೆ 'ಯ'ಕಾರಾಗಮವಾಗುತ್ತದೆ. ಇದಕ್ಕೆ 'ಯ'ಕಾರಾಗಮಸಂಧಿ ಎನ್ನುತ್ತಾರೆ.

ಉದಾಹರಣೆಗೆ:

ನುಡಿ + ಒಳಗೆ = ನುಡಿಯೊಳಗೆ

ಬೆಸಗೆ + ಒಳಗೆ = ಬೆಸಗೆಯೊಳಗೆ

ಮನೆ + ಒಳಗೆ = ಮನೆಯೊಳಗೆ

೩. **'ವ'ಕಾರಾಗಮಸಂಧಿ:** ಮಧ್ಯ ಮತ್ತು ಪಶ್ಚ ಸ್ವರಗಳಿಂದ ಅಂತ್ಯವಾಗುವ ಪೂರ್ವ ಪದಗಳಿಗೆ ಯಾವುದೇ ಸ್ವರದಿಂದ ಆರಂಭವಾಗುವ ಪದವು ಎದುರಾದರೆ ಅಲ್ಲಿ 'ವ'ಕಾರಾಗಮವಾಗುತ್ತದೆ.

ಉದಾ: ತಿಲಕ + ಇಟ್ಟು = ತಿಲಕವಿಟ್ಟು

ಗುಣ + ಎಲ್ಲಿ = ಗುಣವೆಲ್ಲಿ

ವಧು + ಇಗೆ = ವಧುವಿಗೆ

ಗುರು + ಅಲ್ಲಿ = ಗುರುವಲ್ಲಿ ಇತ್ಯಾದಿ.

**ವ್ಯಂಜನ ಸಂಧಿಗಳು ವ್ಯಂಜನ ಸಂಧಿಗಳಲ್ಲಿ ಮೂರು ಪ್ರಕಾರಗಳಿವೆ. ಅವುಗಳೆಂದರೆ**

೧. ದ್ವಿತ್ವಸಂಧಿ, ೨. ಗ, ದ, ಬ, ಚ, ಸಂಧಿ ೩. ಉಭಯೋಷ್ಠ್ಯ ಅರೆವ್ಯಂಜನ ಸಂಧಿ

೧. **ದ್ವಿತ್ವಸಂಧಿ:** ಪೂರ್ವಪದದ ಕೊನೆಗೆ ರ್, ಣ್, ಲ್, ವ್ಯಂಜನವಿದ್ದು, ಉತ್ತರಪದದ ಆರಂಭದಲ್ಲಿ ಯಾವುದೇ ಒಂದು ಸ್ವರ ಅಥವಾ ವ್ಯಂಜನವು ಬಂದರೆ ಅಲ್ಲಿ ದ್ವಿತ್ವವಾಗುತ್ತದೆ.

ಉದಾ: ಇರ್ + ಕೆಲ = ಇಕ್ಕೆಲ

ಕಣ್ + ಎವೆ = ಕಣ್ಣೆವೆ

ಮೆಲ್ + ಎನೆ = ಮೆಲ್ಲನೆ

ತಣ್ + ಎನೆ = ತಣ್ಣನೆ

ಇರ್ + ಬಗೆ = ಇಬ್ಬಗೆ

ಮೆಲ್ + ಅನ್ = ಮೆಲ್ಲನ್ ಇತ್ಯಾದಿ

**೨. ಗ, ದ, ಬ, ಚ, ಸಂಧಿ:** ಉತ್ತರ ಪದದ ಆದಿಯಲ್ಲಿರುವ ಕ, ತ, ಪ, ಸ, ಧ್ವನಿಮಾಗಳು ಸಂಧಿ ಕ್ರಿಯೆಯಾದಾಗ ಕ್ರಮವಾಗಿ ಗ, ದ, ಬ, ಚ, ಗಳಾಗಿ ಮಾರ್ಪಡುತ್ತದೆ. ಈ ರೀತಿಯಾದ ಸಂಧಿ ವಿಧಾನವನ್ನೇ ಗ, ದ, ಬ, ಚ, ಸಂಧಿ ಎನ್ನುವರು.

ಇಲ್ಲಿ ಅಘೋಷ ಧ್ವನಿಮಾಗಳು ಘೋಷ ಧ್ವನಿಮಾಗಳಾಗಿವೆ.

ಉದಾ: ಹೊಸ + ಕನ್ನಡ = ಹೊಸಗನ್ನಡ

ಪಳ + ಕನ್ನಡ = ಪಳಗನ್ನಡ

ಹೂ + ತೋಟ = ಹೂದೋಟ

ಹುಲಿ + ತೊಗಲು = ಹುಲಿದೊಗಲು

ಕಣ್ + ಪನಿ = ಕಂಬನಿ

ಇರ್ + ಸಾಸಿರ = ಇರ್ಚ್ಛಾಸಿರ

ಮರು + ಸಲ = ಮರ್ಚಲ ಇತ್ಯಾದಿ

**೩. ಉಭಯೋಷ್ಠ್ಯ ಅರೆವ್ಯಂಜನ ಸಂಧಿ:** ಉತ್ತರ ಪದದ ಆದಿಯಲ್ಲಿ ಉಭಯೋಷ್ಠ್ಯ ವ್ಯಂಜನಗಳು ಅವು ಸಂಧಿ ಪ್ರಕ್ರಿಯೆಯ ನಂತರ ಅವು ಉಭಯೋಷ್ಠ್ಯ ಅರೆವ್ಯಂಜನ ಸಂಧಿಗಳಾಗಿ ಮಾರ್ಪಡುತ್ತವೆ.

ಉದಾ: ಕೆನೆ + ಹಾಲು = ಕೆನೆವಾಲು

ಕಡು + ಬಿಸಿಲು = ಕಡುವಿಸಿಲು

ಮೆಲ್ + ಮಾತು = ಮೆಲ್ವಾತು

ಕೈ + ಪಿಡಿ = ಕೈವಿಡಿ

ಎಳೆ + ಬಾಳೆ = ಎಳೆವಾಳೆ ಇತ್ಯಾದಿ.

## ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ ಕುರಿತ ಚರ್ಚೆ

ಕನ್ನಡ ವ್ಯಾಕರಣ ಭಾಷೆಯ ವಿವೇಚನೆ ಸಂದರ್ಭದಲ್ಲಿ ಸಂಸ್ಕೃತ ಪದಗಳ ಒಳರಚನೆಯಲ್ಲಿ ಬಳಕೆಯಾಗುವ ನಿಯಮಗಳನ್ನಿಟ್ಟುಕೊಂಡು ಕನ್ನಡ ಪದಗಳ ಒಳರಚನೆಯನ್ನು ವರ್ಣಿಸುವುದು ರೂಢಿಯಾಗಿದೆ. ಆದರೆ ಕನ್ನಡ ಸಂಸ್ಕೃತಕ್ಕಿಂತ ತೀರಾ ಭಿನ್ನವಾದ ಭಾಷೆಯಾದ ಕಾರಣ ಈ ವಿಧಾನದ ಮೂಲಕ ನಮಗೆ ಕನ್ನಡ ಪದಗಳ ನಿಜವಾದ ಸ್ವರೂಪವೇನು ಎಂಬುದನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಇದಕ್ಕೆ ಬದಲಾಗಿ ಕನ್ನಡ ಪದಗಳನ್ನು ನೇರವಾಗಿ ಪರಿಶೀಲಿಸಿ ಅವುಗಳ ತಯಾರಿಕೆಯಲ್ಲಿ ಎಂತಹ ನಿಯಮಗಳೆಲ್ಲ ಬಳಕೆಯಾಗುತ್ತವೆ. ಹೇಗೆ ಕನ್ನಡದಲ್ಲಿ ಬೇರೆ ಬೇರೆ ಭಾಷೆಯ ಪದಗಳು ಪದಗಳಿಗೆ ಪ್ರತ್ಯಯಗಳನ್ನು ಸೇರಿಸಿ ಸಂಧಿ ಪದಗಳನ್ನು ರಚಿಸಲಾಗುತ್ತದೆ. ಈ ಪ್ರಕಾರದ ಸಂಧಿ ಪದಗಳನ್ನು ಯಾವ ಭಾಷೆಯ ಯಾವ ಪ್ರಕಾರದ ಸಂಧಿ ನಿಯಮಕ್ಕೆ ಅಳವಡಿಸಿ, ಕಲಿಸಬೇಕು ಅಥವಾ ಯಾವ ಸಂಧಿಯ ಹೆಸರಿನಲ್ಲಿ ಹೆಸರಿಸಬೇಕು ಎಂಬುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಕನ್ನಡದ ಸಂಧಿಗಳನ್ನು ನಾವು ಲೋಪ, ಆಗಮ ಮತ್ತು ಆದೇಶ ಎಂದು ವಿಭಜಿಸುತ್ತೇವೆ. ಕನ್ನಡ ಪದಕ್ಕೆ ಕನ್ನಡ ಪದವೇ ಪರವಾದಾಗ ಈ ಸಂಧಿಗಳು ನಡೆಯುತ್ತವೆ. ಉತ್ತರ ಪದ ಸ್ವರದಿಂದ ಮೊದಲಾದರೆ ಲೋಪ ಇಲ್ಲವೆ ಆಗಮ ಸಂಧಿಗಳು ವ್ಯಂಜನ ಇದ್ದರೆ ಸಾಮಾನ್ಯವಾಗಿ ಆದೇಶ ಸಂಧಿಯು ನಡೆಯುವುದು. ಇದು ಅಷ್ಟು ಖಚಿತವಾದ ನಿಯಮವಾಗಿ ಉಳಿದಿಲ್ಲ. (ಪೂರ್ವಪದದ ಕೊನೆಯ ಧ್ವನಿಯು ಯಾವುದು ಎಂಬುದು ಕೂಡ ಮುಖ್ಯ)

ಏಕೆಂದರೆ ಈಚಿನ ದಶಕಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಸಂಧಿ ಮಾಡುವ ಪ್ರವೃತ್ತಿ ಹೆಚ್ಚಾಗುತ್ತದೆ. ಹೀಗಿದ್ದಾಗ ಯಾವ ಭಾಷೆಯ ಸಂಧಿ ನಿಯಮವನ್ನು ಅನುಸರಿಸಬೇಕು ಎಂಬ ಪ್ರಶ್ನೆ ಎದುರಾಗುತ್ತದೆ. ಉದಾಹರಣೆಗೆ ಊಟೋಪಾಚಾರ ಎಂಬ ರಚನೆಯನ್ನೇ ನೋಡೋಣ. ಇಲ್ಲಿ 'ಊಟ' ಎಂಬ ಪೂರ್ವಪದ ಕನ್ನಡದ್ದಾಗಿದ್ದು 'ಉಪಚಾರ' ಎಂಬ ಉತ್ತರ ಪದ ಸಂಸ್ಕೃತ ಪದವಾಗಿದ್ದು, ಈ ಊಟೋಪಚಾರ ಎಂಬ ಸಮಸ್ತ ಪದಕ್ಕೆ

ಅಳವಡಿಕೆಯಾಗಿರುವ ನಿಯಮ ಮಾತ್ರ ಸಂಸ್ಕೃತದ ಗುಣಸಂಧಿಯ ನಿಯಮವನ್ನು ಪಾಲಿಸಲಾಗಿದೆ. 'ಅ' ಕಾರಕ್ಕೆ 'ಉ'ಕಾರ ಪರವಾದಾಗ ಅ + ಉ ಕಾರಗಳ ಸ್ಥಾನದಲ್ಲಿ 'ಓ' ಕಾರ ಬರುವುದು ಈ ಸಂಧಿಯ ನಿಯಮ. ಇಂತಹ ಪ್ರಸಂಗಗಳಲ್ಲಿ ಸಾಮಾನ್ಯವಾಗಿ ಸಂಸ್ಕೃತದ ಸಂಧಿ ನಿಯಮಗಳನ್ನೇ ಪಾಲಿಸಬೇಕಾಗುತ್ತದೆ ಎಂದು ತಿಳಿಯಬೇಕೋ ಅಥವಾ ಬೇರೆ ಯಾವುದೋ ಒಂದು ಪದ ರಚನೆಯ ಮಾದರಿಯನ್ನು ಅನುಕರಿಸಿ ಈ ಹೊಸ ರೂಪಗಳನ್ನು ಸೃಷ್ಟಿಸುತ್ತಾರೆ ಎಂದು ತಿಳಿಯಬೇಕೋ ಈ ಪ್ರಶ್ನೆ ಸಾಮಾನ್ಯವಾಗಿ ಎದುರಾಗುತ್ತದೆ.

ಇಷ್ಟೇ ಅಲ್ಲ ಇತರೆ ಅನೇಕ ಪರಭಾಷೆಗಳೊಂದಿಗೆ ಅಂದರೆ ಆಂಗ್ಲ ಪದಕ್ಕೆ ಕನ್ನಡ ಪದ ಪರವಾಗುವುದು ಆಂಗ್ಲಪದಕ್ಕೆ ಸಂಸ್ಕೃತದ ಪದ ಪರವಾಗುವುದು. ಪರ್ಸೋ‌ಅರೇಬಿಕ್ ಪದಕ್ಕೆ ಸಂಸ್ಕೃತ, ಅಥವಾ ಕನ್ನಡದ ಉತ್ತರ ಪದಪರವಾಗುವುದು ಇತರೆ ಅನೇಕ ಭಾಷೆಗಳಿಗೆ ಕನ್ನಡ ಮತ್ತು ಸಂಸ್ಕೃತದ ಪೂರ್ವೋತ್ತರ ಪದಗಳು ಪರವಾಗಿ ಸಾಮಾನ್ಯವಾಗಿ ಸಂಸ್ಕೃತದ ಸವರ್ಣ ದೀರ್ಘಸಂಧಿ ಹಾಗೂ ಗುಣಸಂಧಿ ನಿಯಮವನ್ನು ಹೆಚ್ಚಾಗಿ ಪಾಲಿಸುತ್ತವೆ. ಇದು ಎಷ್ಟು ಸಮಂಜಸವಾಗಿದೆ. ಈ ಪ್ರಕಾರದ ಸ್ವರೂಪಗಳನ್ನೇ ನಾವು ಪ್ರಸ್ತುತ ಸಂದರ್ಭದಲ್ಲಿ ಕನ್ನಡಸಂಧಿ : ಸಮಸ್ಯೆಯ ಸ್ವರೂಪಗಳೆಂದು ಗುರುತಿಸಿಕೊಂಡಿದ್ದೇವೆ. ಕನ್ನಡ ಸಂಧಿ : ಸಮಸ್ಯೆಯ ಸ್ವರೂಪಗಳೆಂದರೆ, ಬೇರೆ ಬೇರೆ ವಿಭಿನ್ನ ಭಾಷೆಯ ಪೂರ್ವೋತ್ತರ ಪದ ಅಥವಾ ಪ್ರತ್ಯಯಗಳಿಗೆ ಬೇರೆ ಬೇರೆ ಭಾಷೆಯ ಪದ ಅಥವಾ ಪ್ರತ್ಯಯಗಳೊಂದಿಗೆ ಸೇರಿಸಿ ಸಂಧಿ ಮಾಡುವಾಗ ಈ ಸೇರಿಕೆಯ ನಿಯಮಗಳಲ್ಲಿ ಉಂಟಾಗುವಂತಹ ಅಕ್ಷರ (ಧ್ವನಿ) ವ್ಯತ್ಯಾಸಗಳ ಸ್ವರೂಪಗಳನ್ನೇ, ನಾವು ಕನ್ನಡ ಸಂಧಿ : ಸಮಸ್ಯೆಯ ಸ್ವರೂಪಗಳೆಂದು, ಅಧ್ಯಯನದ ಹಿನ್ನೆಲೆಯಲ್ಲಿ ಕಂಡುಕೊಳ್ಳಲಾಗಿದೆ.

ಈ ಪ್ರಕಾರದ ಸಮಸ್ಯೆಯ ಸ್ವರೂಪಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚೆಯ ಮೂಲಕ ಉದಾಹರಿಸಲಾಗಿದೆ.

ಕನ್ನಡ ಭಾಷೆಯೊಂದಿಗೆ ಬೇರೆ ಬೇರೆ ಭಾಷೆಯ ಪದಗಳು ಸೇರಿ ಸಂಧಿ ಪದಗಲಾಗಿ ರಚನೆ ಆಗುತ್ತಿವೆ. ಅಂತಹ ಪದಗಳನ್ನು ಹೀಗೆ ವಿಂಗಡಿಸಬಹುದು.

೧. ಕನ್ನಡ + ಸಂಸ್ಕೃತ

೨. ಸಂಸ್ಕೃತ + ಕನ್ನಡ

೩. ಇಂಗ್ಲೀಶ್ + ಕನ್ನಡ

೪. ಇಂಗ್ಲೀಶ್ + ಸಂಸ್ಕೃತ

೫. ಪರ್ಸೋ ಅರೇಬಿಕ್ + ಸಂಸ್ಕೃತ

೬. ಪೋರ್ಚುಗೀಸ್ + ಕನ್ನಡ

೭. ಪೋರ್ಚುಗೀಸ್ + ಸಂಸ್ಕೃತ

೮. ಪರ್ಶಿಯನ್ + ಸಂಸ್ಕೃತ

ಮೇಲಿನ ಎಂಟು ಪ್ರಕಾರದಲ್ಲಿ ಕಾಣುವ ಸಮಸ್ಯೆಯ ಸ್ವರೂಪಗಳನ್ನು ದಾಖಲಿಸಿ ಅವುಗಳಲ್ಲಿ ಕಂಡುಬರುವ ಸಮಸ್ಯೆಗಳಿಗೆ ಕಾರಣಗಳನ್ನು ತಿಳಿಸುವ ಮೂಲಕ ಚರ್ಚೆ ಮಾಡಲಾಗಿದೆ.

**ಕನ್ನಡಾಂಗ್ಲ**

ಈ ಪ್ರಕಾರದ ವಿಶಿಷ್ಟ ಮಾದರಿಯ ಪದಗಳು ಕನ್ನಡದ ದಿನಪತ್ರಿಕೆ ಹಾಗೂ ವಾರಪತ್ರಿಕೆಗಳಲ್ಲಿ ಕಂಡುಬರುವುದು ಇಂದಿನ ವಿಶೇಶವಾಗಿದೆ. ಕನ್ನಡಾಂಗ್ಲ ಎಂಬ ಪದದ ಒಳರಚನೆಯನ್ನು ಗಮನಿಸಿದಾಗ ಕನ್ನಡ ಮತ್ತು ಆಂಗ್ಲ ಎಂಬ ಎರಡು ಭಾಷೆಗಳನ್ನು ಸೂಚಿಸುವ ಪದಗಳನ್ನು ಸೇರಿಸಿ ಸೇರಿಕೆಯ ನಿಯಮಕ್ಕೆ ಅನುಸಾರವಾಗಿ ಕನ್ನಡಾಂಗ್ಲ ಎಂಬ ಸಂಧಿಪದವನ್ನು ರಚಿಸಲಾಗಿದೆ. ಆದರೆ ಈ ಪದವು ಅನುಸರಿಸಿರುವ ಸಂಧಿ ನಿಯಮ ಸಂಸ್ಕೃತದ ಸವರ್ಣದೀರ್ಘಸಂಧಿ ಈ ಕನ್ನಡಾಂಗ್ಲ ಪದವನ್ನು ಆಂಗ್ಲ ಎಂಬುದಾಗಿ ಪ್ರತ್ಯೇಕವಾಗಿ ಬರೆಯಬಹುದು. ಆದರೆ ಭಾಷೆಯಲ್ಲಿ ಇಂದು ಹೊಸಮಾರ್ಪಾಡುಗಳು ಏರ್ಪಟ್ಟು ಈ ಪ್ರಕಾರದ ಪದಗಳು ಶ್ರಮ ಹಾಗೂ ಸಮಯದ ಉಳಿತಾಯಕ್ಕಾಗಿ ಸೇರಿಕೆಯ ನಿಯಮವನ್ನು ಅನುಸರಿಸುವಾಗ ಈ ಪ್ರಕಾರದ ಸಮಸ್ಯೆಯ ಸ್ವರೂಪಗಳು ಗೋಚರಿಸುತ್ತವೆ. ಇಂತಹುವುಗಳನ್ನು ಯಾವ ಭಾಷೆಯ ಯಾವ ಪ್ರಕಾರದ ಸಂಧಿನಿಯಮದಡಿಯಲ್ಲಿ ವಿವರಿಸಬೇಕೆಂದು ಆಧುನಿಕ ವ್ಯಾಕರಣ ಕ್ಷೇತ್ರದ ಚಿಂತನೆಯಾಗಿದೆ.

**೧. ಕನ್ನಡ + ಸಂಸ್ಕೃತ**

ಕನ್ನಡಾರ್ಥಿ: ಎಂಬ ಪದವು ವಿಶೇಷವಾದ ಸಂಧಿಪದಗಳ ಮಾದರಿಯ ಹಿನ್ನೆಲೆಯಲ್ಲಿ ಬಳಕೆಯಾಗಿರುವ ಪದವಾಗಿದೆ. ಕನ್ನಡಾರ್ಥಿ ಎಂಬ ಪದವು ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳಲ್ಲಿ ಒಂದಾಗಿದೆ. ಹೇಗೆಂದರೆ– ಕನ್ನಡಾರ್ಥಿ ಎಂಬ ಪದದ ಒಳರಚನೆಯನ್ನು ಗಮನಿಸಿದಾಗ ಕನ್ನಡ ಎಂಬ ಪದಕ್ಕೆ ಅರ್ಥಿ ಎಂಬ ಸಂಸ್ಕೃತದ ಉತ್ತರ ಪದವು ಸೇರಿ ಕನ್ನಡಾರ್ಥಿ ಎಂಬ ಸಂಧಿ ಪದವು ರಚನೆಯಾಗಿದೆ. ಅಂದರೆ ಎರಡೂ ಬೇರೆ ಬೇರೆ ಭಾಷೆಯ ಪದಗಳು ಸೇರಿ ಸಂಸ್ಕೃತದ ಸವರ್ಣದೀರ್ಘ ಸಂಧಿ ನಿಯಮದ ಮಾದರಿಯಲ್ಲಿ ಬಳಕೆಯಾಗಿದೆ.

ಈ ಹಿನ್ನೆಲೆಯ 'ಊಟೋಪಚಾರ' ಎಂಬ ಪದವನ್ನು ತೆಗೆದುಕೊಂಡಾಗಲೂ ಸಹ ಅದರ ಒಳರಚನೆಯಲ್ಲಿ ಊಟ ಕನ್ನಡ ಪದವಾಗಿದ್ದು ಉಪಚಾರ ಸಂಸ್ಕೃತ ಪದವಾಗಿದೆ. ಈ

ಎರಡೂ ಭಾಷೆಯ ಪದಗಳು ಸೇರಿಸಿ ಊಟೋಪಚಾರ ಎಂಬ ಸಂಧಿಪದವನ್ನು ಸಂಸ್ಕೃತದ ಗುಣಸಂಧಿ ನಿಯಮದಡಿಯಲ್ಲಿ ಬಳಕೆಯಾಗಿದೆ. ಆದರೆ ಕನ್ನಡ ಸಂಧಿಗಳಲ್ಲಿ ಸಂಸ್ಕೃತದ ಸಂಧಿನಿಯಮ ಏರ್ಪಟ್ಟಿರುವುದು ಸೂಕ್ತವೇ ಎಂಬ ಪ್ರಶ್ನೆಯ ಮೂಲಕವಾಗಿ 'ಕನ್ನಡಕ್ಕೆ ಬೇಕು ಕನ್ನಡದ್ದೇ ಸಂಧಿಕಾರ್ಯ' ಎಂಬ ಅಂಶವು ಪ್ರಸ್ತುತ ಅಧ್ಯಯನದಿಂದ ಗೋಚರವಾಗುವಂತ ಮಹತ್ವದ ಅಂಶವಾಗಿದೆ.

ಈ ಮಾದರಿಯ ಸ್ವರೂಪಗಳು ಇಂತಿವೆ.

ಪೂರ್ವಪದವು ಕನ್ನಡವಾಗಿದ್ದು ಉತ್ತರ ಪದವು ಸಂಸ್ಕೃತವಾಗಿರುವ ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳು ಇಂತಿವೆ.

ಕನ್ನಡಾರ್ಥಿ

ಆಟಾರ್ಥಿ

ಓಟಾರ್ಥಿ

ನೋಟಾರ್ಥಿ

ಸಾಲಾರ್ಥಿ

ಕೀಟಾರ್ಥಿ

ಕಾಟಾರ್ಥಿ

ಸಡಿಲಾರ್ಥಿ

ಕುಪ್ಪಸಾರ್ಥಿ

ಕನ್ನಡಾಭ್ಯಾಸ

ಆಟಾಭ್ಯಾಸ

ಕನ್ನಡಾಭಿಮಾನ

ಕನ್ನಡಾಧ್ಯಯನ

ಕನ್ನಡಾಂತರ

ಕನ್ನಡಾಕಾರ

ಓಟಾಭ್ಯಾಸ

ಓಟಾಧ್ಯಯನ

ಊಟಾಭ್ಯಾಸ

ಊಟಾಧ್ಯಯನ

ಆಟಾಭಿಮಾನ

ಊಟಾಭಿಮಾನ

ಓಟಾಭಿಮಾನ

ಊಟಾಚರಣೆ

ಕಾಟಾಚರಣೆ

ಆಟಾಚಾರಣೆ

ಕನ್ನಡಾಚರಣೆ

ಕಲಿಕಾರ್ಥಿ

ಕಲಿಕಾಚರಣೆ

ಮರೀಶ

ಕರೀಶ

ನರೀಶ

ಕನ್ನಡೇತರ

ಕನ್ನಡೋತ್ತರ

ಕನ್ನಡೋತ್ಸವ

ಕನ್ನಡೋತ್ಸಾಹ

ಕನ್ನಡೋಪಚಾರ

ಓಟೇತರ

ಓಟೋತ್ತರ

ಓಟೋತ್ಸವ

ಊಟೇತರ

ಊಟೋತ್ತರ

ಊಟೋತ್ಸವ

ಊಟೋಪಚಾರ

ಆಟೋತ್ತರ

ಆಟೋತ್ಸವ

ಆಟೋಪಚಾರ

ಆಟೋಪಕರಣ

ಮೂಡಣೇತರ

ಮೂಡಣೋತ್ತರ

ಮೂಡಣೋತ್ಸವ

ಪಡುವಣೇತರ

ಪಡುವಣೋತ್ತರ

ಪಡುವಣೋತ್ಸವ

ತೆಂಕಣೇತರ

ನೆತ್ತರೇತರ

ತೆಂಕಣೋತ್ತರ

ತೆಂಕಣೋತ್ಸವ

ಬಡಗಣೇತರ

ಬಡಗಣೋತ್ತರ

ಬಡಗಣೋಡತ್ಸವ

ನೆಲೇತರ

ನೆಲೋತ್ತರ

ಕಠೇತರ

ಕದೋತ್ತರ

ಹೊಲೇತರ

ಹೊಲೋತ್ತರ

ಸಡಿಲೇತರ

ಸಡಿಲೋತ್ತರ

ತುಪ್ಪೇತರ

ತುಪ್ಪೋತ್ತರ

ಕುಪ್ಪಸೇತರ

ಕುಪ್ಪಸೋತ್ತರ

ರಾಮೇಶ

ನಿಂಗೇಶ

ತಿಪ್ಪೇಶ

ಸಿದ್ದೇಶ

ಮಲ್ಲೇಶ

ಅಜ್ಜೇಶ

ಪೂಜೇತರ

ಕತ್ತಲೋಪಚಾರ

ಪೂಜೋಪಚರ

ಅಡ್ಡೋಪಚಾರ

ಅಡ್ಡೋಪದೇಶ

ಪೂಜೋತ್ಸಾಹ

ಪೂಜೋಪದೇಶ

ಪಾದೇತರ

ಪಾದೋಪಚಾರ

ದಯೇತರ

ದಯೋತ್ಪಾದನೆ

ದಯೋತ್ಸಾಹ

ಗಡ್ಡೋಪಾಖ್ಯಾನ

ಕೀಟೋಪಚಾರ

ಕೀಟೋತ್ಪಾದಕ

ಕಲಿಕೇತರ

ಕಲಿಕೋಪಕರಣ

ಕಲಿಕೋತ್ಸವ

ಕಲಿಕೋತ್ಪಾದಕ

ಎಸೆಯೋತ್ಸಾಹ

ಎತ್ತರೇತರ

ಎತ್ತರೋತ್ತರ

ಜಗಳೋಪಚಾರ

ಜಗಳೋತ್ಸಾಹ

ಕರ್ನಾಟಕೇತರ

ಕರ್ನಾಟಕೋತ್ಸವ

ಅನುಪಮೇತರ

ಅನುಪಮೋತ್ತರ

ಕತ್ತಲೋಪಚಾರ

ಮಳೆಗಾಲೇತರ

ಮಳೆಗಾಲೋತ್ಸವ

ಮಳೆಗಾಲೋತ್ಸಾಹ

ಮಳೆಗಾಲೋದ್ಯಮ

ಮಳೆಗಾಲೋಪಚಾರ

ಆಟಾಭಿಮಾನಿ

ಮೂಡಾಭಿಮಾನಿ

ಕೊಯ್ಲೋತ್ತರ

ಎಸೆಯೋತ್ಸಾಹ

ಪಾದೋಪಕರಣ

ಹಸುರಿನಾಲಯ

ಹಸುರಿನೋನ್ಮಾದ

ಕಬ್ಬಿಗೇತರ

ಕಬ್ಬಿಗೋತ್ತರ

ಕಬ್ಬಿಗೋಪಚಾರ

ಹೊಲೋಪಚಾರ

ಒಡನಾಟೋತ್ತರ

ದಡ್ಡೇತರ

ಬಣ್ಣೋದ್ಯಮ

ಈ ಮೇಲೆ ಪಟ್ಟಿ ಮಾಡಲಾದ ಕನ್ನಡದ ಪೂರ್ವಪದ ಸಂಸ್ಕೃತದ ಉತ್ತರಪದಗಳು ಸೇರಿ ಮಾಡಿದ ಸಂಸ್ಕೃತದ ಸಂಧಿಕಾರ್ಯವಾಗಿದೆ.

ಈ ಸಮಸ್ಯೆಯನ್ನು ಅವಲೋಕಿಸುತ್ತಾ ಹೋದರೆ ಕನ್ನಡ ಸಂಧಿಗಳ ಕಲಿಕೆಯು ಪ್ರಸ್ತುತ ಸಂದರ್ಭದಲ್ಲಿ ಬಹಳ ತೊಡಕಿನ ವಿಷಯವಾಗಿದೆ. ಹೇಗೆಂದರೆ ಸಾಮಾನ್ಯವಾಗಿ ಆಟ + ಅರ್ಥಿ= ಆಟಾರ್ಥಿ ಎಂಬ ಪದವನ್ನು ತೆಗೆದುಕೊಂಡಾಗ ಒಂದು ಭಾಷೆಯ ಪೂರ್ವಪದ ಆಟ, ಕನ್ನಡ ಪದ ಮತ್ತೊಂದು ಸಂಸ್ಕೃತ ಭಾಷೆಯ ಉತ್ತರ ಪದ ಸೇರಿ ಅರ್ಥಿ ಸಂಸ್ಕೃತದ ಸವರ್ಣ ದೀರ್ಘಸಂಧಿ ನಿಯಮಗಳನ್ನು ಅನುಸರಿಸಲಾಗಿದೆ.

ಆದರೆ ಈ ಸಂಸ್ಕೃತ ಸಂಧಿ ನಿಯಮ ಕನ್ನಡ ಸಂಧಿಗಳಲ್ಲಿ ಎಷ್ಟರ ಮಟ್ಟಿಗೆ ಕಲಿಯಲು ಸರಿಯಾದ ವಿಧಾನವಾಗಿದೆ. ಇಂಥಹ ಸಾವಿರಾರು ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳು ಎದುರಾಗುತ್ತದೆ. ಕಾರಣ ಡಾ.ಡಿ.ಎನ್.ಶಂಕರಭಟ್ಟರು ಈ ಎಲ್ಲಾ ಸಂಧಿಗಳನ್ನು ಕನ್ನಡದ ಲೋಪ, ಆಗಮ, ಆದೇಶ ಸಂಧಗಳಲ್ಲಿ ಸೇರಿಸಬಹುದೆಂದು ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಆಲೋಚಿಸಿದರೆ, ಅನೇಕ ಭಾಷೆಗಳಿಂದ ನಾವು ಪದಗಳನ್ನು ಸಂಧಿಕಾರ್ಯದಲ್ಲಿ ಬಳಸಿಕೊಳ್ಳುತ್ತೇವೆ. ಹಾಗಾದರೆ ನಾವು ಸಂಸ್ಕೃತಕ್ಕೆ ಪ್ರತ್ಯೇಕವಾದ ಸಂಧಿಕಾರ್ಯವನ್ನು ಕೊಟ್ಟು ಸಂಸ್ಕೃತದ ಸಂಧಿನಿಯಮವನ್ನು ಹೋಲುತ್ತದೆ. ಒಂದು ಸ್ಥಾನ ಕೊಟ್ಟಂತೆ ಇತರೆ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿದ ಪದಗಳಿಗೂ ಅದೇ ಸಂಸ್ಕೃತದ ಸಂಧಿ ನಿಯಮಗಳನ್ನು ಹೇರುವಂತದ್ದೇನಿದೆ? ಹಾಗಿದ್ದಲ್ಲಿ ಇಂಗ್ಲೀಶ್, ಪರ್ಶಿಯನ್, ಅರಾಬಿಕ್, ಮರಾಠಿ, ಹಿಂದಿ, ಇತ್ಯಾದಿ ಭಾಷೆಗಳಿಗೆ ಅವುಗಳದ್ದೇ ಆದ ಸಂಧಿ ಕಾರ್ಯವಿರಬೇಕು. ಆದರೆ ಅಂತಹ ಎರಡೆರಡು ಭಾಷೆಗಳ ಸಂಧಿಪದಗಳನ್ನು ನಾವಿಲ್ಲಿ ಅತ್ಯಂತ ತೊಡಕಿನ ಸಮಸ್ಯೆಯಾಗಿ ಕಾಣುವ ಮೊದಲು ಈ ಎಲ್ಲಾ ಹೊಸ ರಚನೆಯ ಪದಗಳನ್ನು ಉದಾಹರಣೆ: ಆಟಾರ್ಥಿ, ಓಟಾರ್ಥಿ, ಸಾಲಾರ್ಥಿ, ಇತ್ಯಾದಿ ಪದಗಳನ್ನು ವಿದ್ಯಾರ್ಥಿ ಮಾದರಿಯಲ್ಲಿ ಬಳಕೆಯಾಗಿದೆ ಎಂದು ಹೇಳಿ ಈ ಸಮಸ್ಯೆಗೆ ತೆರೆ ಎಳೆಯುತ್ತಾರೆ.

ಆದರೆ ಅವರ ನಿಲುವುಗಳು ಸಾರ್ವತ್ರಿಕವಾಗಿವೆ. ಯಾವ ಸಮಸ್ಯೆಗಳಿಗೂ ಎಡೆಮಾಡಿಕೊಡುವ ಸಮಸ್ಯೆಗಳು ಬರುವುದೇ ಈ ವ್ಯಾಕರಣದ ವಿಷಯದಲ್ಲಿ ಅದರಲ್ಲೂ ಸಂಧಿಕಾರ್ಯದಲ್ಲಿ ಈ ತೆರನಾಗಿ ಸಮ್ಮಿಶ್ರ ಭಾಷೆಗಳಿಂದ ರಚನೆಯಾಗಿರುವ ಪದಗಳನ್ನು ಯಾವ ಬಗೆಯ ಸಂಧಿನಿಯಮಕ್ಕೆ ಅಳವಡಿಸಬೇಕೆನ್ನುವುದೇ ಪ್ರಸ್ತುತ ಸಮಸ್ಯೆಯ ಸ್ವರೂಪಗಳಾಗಿ ನಿಲ್ಲುತ್ತವೆ.

೨. ಸಂಸ್ಕೃತ + ಕನ್ನಡ

ಶಾಲಾಟ: ಈ ಮಾದರಿಯ ಪದಗಳನ್ನು ಇಂದು ಕನ್ನಡ ನಿಯತಕಾಲಿಕೆ ಪತ್ರಿಕೆಗಳಲ್ಲಿ ಬಳಕೆಯಾಗುವುದು ವಿಶೇಷವಾಗಿದೆ. ಒಂದು ವಿಷಯವನ್ನು ಅತ್ಯಂತ ಆಕರ್ಷಕವಾಗಿ ಮಂಡಿಸಲು ಈ ಮಾದರಿಯ ಪದಗಳನ್ನು ಬಳಸಿಕೊಳ್ಳುತ್ತೀವೆ. ಶಾಲಾಟ ಎಂಬ ಪದದ ಒಳರಚನೆಯನ್ನು

ಗಮನಿಸಿದಾಗ ಶಾಲಾ + ಆಟ ಎಂದು ಒಡೆಯಬೇಕೆ ಅಥವಾ ಶಾಲೆ + ಆಟ ಎಂದು ಒಡೆಯಬೇಕೆ ಎಂಬುದು ಒಂದು ಸಮಸ್ಯೆಯಾಗಿದೆ. ಮತ್ತೊಂದು ಸಮಸ್ಯೆ ಎಂದರೆ 'ಶಾಲೆ/ಶಾಲಾ' ಎಂಬ ಪದವು ಸಂಸ್ಕೃತವಾಗಿದ್ದು, 'ಆಟ' ಎಂಬ ಕನ್ನಡದ ಉತ್ತರ ಪದದೊಡನೆ ಸೇರಿಸಿ ಸಂಸ್ಕೃತದ ಸವರ್ಣದೀರ್ಘ ಸಂಧಿ ನಿಯಮದಡಿಯಲ್ಲಿ ವಿವರಿಸಬೇಕೆಂಬುದು ನಮ್ಮ ಮುಂದಿರುವ ಪ್ರಶ್ನೆಯಾಗಿದೆ.

ಈ ಮಾದರಿಯಲ್ಲಿ ಬಳಕೆಯಾಗಿರುವ ಪದಗಳು ಇಂತಿವೆ.

ಉದಾಹರಣೆಗೆ : ಲೀಲಾಟ

ಕಲಾಟ

ಹಾಠಾಟ

ಕ್ರೀಡಾಟ

ದೃಶ್ಯಾಟ

ಸಮರಾಟ

ಈ ಮೇಲ್ಕಾಣಿಸಿದ ಸಂಧಿಪದಗಳಲ್ಲಿ ಸಂಸ್ಕೃತದ ಪೂರ್ವಪದ ಹಾಗೂ ಕನ್ನಡದ ಉತ್ತರ ಪದಗಳಿಂದ ಕೂಡಿದ ಕನ್ನಡ ಸಂಧಿಯ ಸಮಸ್ಯೆಯ ಸ್ವರೂಪಗಳಿವೆ. ದೃಶ್ಯ+ಆಟ = ದೃಶ್ಯಾಟ ಹಾಗೂ ದೃಶ್ಯ + ಉದ್ಯೋಗ = ದೃಶ್ಯೋದ್ಯೋಗ ಎಂಬ ಸವರ್ಣದೀರ್ಘ ಸಂಧಿ ಮತ್ತು ಗುಣಸಂಧಿಯ ನಿಯಮವನ್ನು ಹೋಲುವ ಕೆಲವು ಪದಗಳನ್ನು ಪಟ್ಟಿಮಾಡಲಾಗಿದೆ.

ಆದರೆ ಕನ್ನಡ ವ್ಯಾಕರಣದ ಉಸಾಬರಿಗೆ ಅದರಲ್ಲೂ ಕನ್ನಡ ಸಂಧಿಗೆ ಸಂಬಂಧಿಸಿದಂತೆ ಪಾರಂಪರಿಕ ವಿವರಣೆ ಈ ತೆರನಾಗಿದೆ. ಅದೆಂದರೆ ಕನ್ನಡ + ಕನ್ನಡ ಶಬ್ದಗಳು ಸೇರಿ ಕನ್ನಡ ಸಂಧಿ ಸಂಸ್ಕೃತ + ಸಂಸ್ಕೃತ ಶಬ್ದಗಳು ಸೇರಿ ಸಂಸ್ಕೃತ ಸಂಧಿಗಳು ಏರ್ಪಡುತ್ತವೆ ಎಂಬ ವಿಧಾನ ತಿಳಿದೇ ಇದೆ. ತದನಂತರದಲ್ಲಿ ಒಂದು ಕನ್ನಡ ಪದ ಸಂಸ್ಕೃತ ಪದದೊಡನೆ ಸೇರಿದಾಗಲೂ ಅದು ಸಂಸ್ಕೃತದ ಸಂಧಿ ನಿಯಮವನ್ನು ಹೋಲುತ್ತದೆ. ಅದರಲ್ಲೇ ಸೇರಿಕೊಳ್ಳುತ್ತದೆ ನಿಜ. ಆದರೆ ಇಂತಹ ಎಷ್ಟೆಲ್ಲಾ ಸಂಧಿ ಪದಗಳನ್ನು ಉದಾಹರಣೆಗಳ ಮೂಲಕವಾಗಿ ವಿವರಿಸಲು ಸಾಧ್ಯ? ಇಂಥಹ ಅಲ್ಪ-ಸ್ವಲ್ಪ ಉದಾಹರಣೆಗಳಿಂದ ಇಂತಹ ಸಂಧಿವಿಧಾನಗಳನ್ನು ಎಷ್ಟು ದಿನಗಳ ಕಾಲ ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯ?

ಇನ್ನೂ ವಿಷೇಶವಾಗಿ ಹೇಳಲೇಬೇಕಾದರೆ ಸಂಸ್ಕೃತ + ಕನ್ನಡ ಪದಗಳು ಕೂಡಿ ಸಂಧಿಪದ ರಚಿಸಬಹುದು. ಆದರೆ ಇವುಗಳನ್ನು ಬಿಡಿಸಿ ಹೇಳಿ ಸಂಧಿ ಹೆಸರು ತಿಳಿಸದರೆ ಶಾಶ್ವತ ನೆನಪಿನಲ್ಲಿರಲು ಎಷ್ಟರ ಮಟ್ಟಿಗೆ ಸಾಧ್ಯ ಎನ್ನವುದೇ ಈ ಮಾದರಿ ಪದಗಳ ನೋಟವಾಗಿದೆ.

**ಇಂಗ್ಲೀಷ್ + ಕನ್ನಡ**

ವೈನೋದಕ: ಇಂತಹ ಪದವನ್ನು ನಮ್ಮ ದಿನಪತ್ರಿಕೆಗಳು ಬೇರೆ ಬೇರೆ ವಿಷಯಗಳನ್ನು ಓದುಗರ ಗಮನವನ್ನು ಸೆಳೆಯುವ ಉದ್ದೇಶದಿಂದ ಈ ಬಗೆಯ ಪದಗಳನ್ನು ಬಳಕೆಮಾಡುತ್ತವೆ. ವೈನೋದಕ ಪದದ ಒಳರಚನೆಯನ್ನು ಗಮನಿಸಿದಾಗ ವೈನ್ + ಉದಕ = ಎಂದು ಒಡೆಯಬೇಕೇ ಅಥವಾ ವೈನ್ + ಉದಕ ಎಂದು ವರ್ಗೀಕರಿಸಬೇಕೇ ಎಂಬುದು ಒಂದು ಸಮಸ್ಯೆ ಈ ಪದ ಗುಣಸಂಧಿಯ ನಿಯಮದಂತೆ ಬಳಕೆಯಾಗಿದೆ. ಆದರೆ ಗುಣಸಂಧಿಯನ್ನು ವಿವರಿಸುವಾಗ ಸಂಸ್ಕೃತ ಮತ್ತು ಸಂಸ್ಕೃತ ಪದಗಳು ಸೇರಿ, ಆಗುವಂತವುಗಳು ಆದರೆ ವೈನೋದಕ ಎಂಬ ಪದರಚನೆಯಲ್ಲಿ ಮೊದಲನೇ ಪದ ಇಂಗ್ಲೀಶ್ ಆಗಿದ್ದು, ಎರಡನೇ ಪದ ಕನ್ನಡ ಪದವಾಗಿದೆ. ಇಂತಹ ಮಾದರಿಯ ಪದಗಳನ್ನು ಸಂಸ್ಕೃತದ ಗುಣಸಂಧಿ ನಿಯಮದ ಅಡಿಯಲ್ಲಿ ವಿವರಿಸಬೇಕೆ ಅಥವಾ ಕನ್ನಡದ ಲೋಪಸಂಧಿಯಾಗಿದೆ.

ಉದಾಹರಣೆಗೆ: ವೈನ್ + ಉದಕ = ವೈನೋದಕ

ವೈನ್ + ಉದ್ಯೋಗ = ವೈನೋದ್ಯೋಗ

ವೈನ್ ಎಂಬ ಆಂಗ್ಲಪದವು ವ್ಯಂಜನಾಂತ್ಯಗೊಂಡಿದೆ. ಉದಕ ಎಂಬ ಪರಪದದ ಆದಿಯಲ್ಲಿಯ 'ಉ' ಕಾರವು ಸೇರಿ ಅವೆರಡರ ಸ್ಥಾನದಲ್ಲಿ 'ಓ' ಕಾರವು ಆದೇಶವಾಗಿ ಬಂದದಕ್ಕೆ ಗುಣಸಂಧಿ ಎಂದು ಸಂಸ್ಕೃತದ ಸಂಧಿನಿಯಮವಿದೆ. ಆದರೆ ಸಂಸ್ಕೃತದ ಇದೇ ಸಂಧಿನಿಯಮದಲ್ಲಿ ಪೂರ್ವಪದದ ಕೊನೆಯ ವ್ಯಂಜನ ಸಹಿತ ಸ್ವರವಾಗಿರಬೇಕು.

ಉದಾಹರಣೆಗೆ: ಜಲ + ಉದಕ = ಜಲೋದಕ

ಜ್ + ಅ, ಲ್ + ಅ – ಉ + ದ್ + ಅ + ಕ್ + ಅ = ಜ್+ಅ+ಲ್ +ಓ+ದ್+ಅ+ಕ್+ಅ ಎಂಬ ಧ್ವನಿವ್ಯತ್ಯಾಸಗಳ ಮಾರ್ಪಾಡನ್ನು ಹೊಂದಿ ಸಂಸ್ಕೃತದ ಗುಣಸಂಧಿ ಎಂದು ಜಲೋದಕ ಎಂಬ ಪದವನ್ನು ಗುರುತಿಸಲಾಗಿದೆ. ಆದರೆ ಮೇಲ್ಕಾಣಿಸಿದ ವೈನೋದಕ ಎಂಬ ಪದವು ಧ್ವನಿಗಳ ಸೇರಿಕೆಯಲ್ಲಿ ಸ್ವಲ್ಪ ಸಮಸ್ಯೆಗಳಾಗಿವೆ.

ಉದಾಹರಣೆ: ವೈನ್ + ಉದಕ = ವೈನೋದಕ ಎಂಬ ಪದದಲ್ಲಿ ವ್+ಐ, ನ್–ಉ+ದ್+ಅ+ಕ್+ಅ = ವ್+ಐ+ನ್+ಓ+ದ್+ಅ+ಕ್+ಅ ಎಂಬ ಧ್ವನಿ ಸೇರಿಕೆಯ ನಿಯಮವನ್ನು ಪಾಲಿಸಬೇಕಾಗಿದೆ.

ಆದರೆ ಜಲೋದಕ ಎಂಬ ಪದವನ್ನು ತೆಗೆದುಕೊಂಡಾಗ ಸಂಸ್ಕೃತದ 'ಜಲ' ಎಂಬ ಪದಕ್ಕೆ ಕನ್ನಡದ 'ಉದಕ' ಎಂಬ ಪದ ಸೇರಿ ಅಲ್ಲಿ 'ಜಲ' ಪದದ ಕೊನೆಯ ಸ್ವರ 'ಅ'

ಕಾರಕ್ಕೆ ಉತ್ತರ ಪದದ ಕನ್ನಡದ ಸ್ವರ 'ಉ'ಕಾರವು ಎದುರಾಗಿ ಪರಸ್ಪರ ಅವೆರಡರ ಸ್ಥಾನದಲ್ಲಿ 'ಓ'ಕಾರವು ಆದೇಶವಾಗಿ ಬರುವುದಕ್ಕೆ ಸಂಸ್ಕೃತದ ಗುಣಸಂಧಿ ಎಂದು ಕರೆಯುತ್ತಾರೆ. ಅನುಸರಿಸಿದ ನಿಯಮವು ಸ್ಪಷ್ಟ ಹಾಗೂ ಸಮಂಜಸವಾಗಿದೆ. ಆದ್ದರಿಂದ ಇಲ್ಲಿ ಸಮಸ್ಯೆ ಅಷ್ಟಾಗಿ ಬರುವುದಿಲ್ಲ.

ಕನ್ನಡ ಸಂಧಿ : ಸಮಸ್ಯೆಯ ಸ್ವರೂಪವನ್ನು ಬಹಳ ಪ್ರಧಾನವಾಗಿ ಕಾಣುವುದು. ಈ ಆಂಗ್ಲ ಕನ್ನಡ ಪದದಲ್ಲಿ ವೈನೋದಕ, ಎಂಬ ಪದವನ್ನು ನೋಡುವಾಗ ವೈನ್ ಎಂಬ ಇಂಗ್ಲೀಷ್ ಪದ ಹಾಗೂ ಉದಕ ಎಂಬ ಕನ್ನಡ ಪದ ಸೇರಿ ವೈನೋದಕ ಎಂಬ ಸೇರಿಕೆಯ ನಿಯಮವನ್ನು ಅನುಸರಿಸಲಾಗಿದೆ. ಈ ಸೇರಿಕೆಯ ನಿಯಮಗಳಲ್ಲಿ ಪಾರಂಪರಿಕವಾದ ಕನ್ನಡ ಸಂಸ್ಕೃತ ಪದಗಳು ಸೇರಿ ಸಂಸ್ಕೃತದ ಸಂಧಿಕಾರ್ಯವೇರ್ಪಡಿಸುವುದು ಸಹಜ. ಆದರೆ ಈ ಇಂಗ್ಲೀಷ್ ಮತ್ತು ಕನ್ನಡ ಪದಗಳು ಸೇರಿ ಸಂಧಿಕಾರ್ಯವೇರ್ಪಡುವುದು ವಿಪರ್ಯಾಸದ ಸಂಗತಿ ಎಂದು ಭಾವಿಸಿದೆ. ನಾವು ಭಾಷೆಯಲ್ಲಿ ದಿನನಿತ್ಯ ಅನೇಕ ಹೊಸ ಹೊಸ ಪದಪ್ರಯೋಗಗಳನ್ನು ಮಾಡುತ್ತೇವೆ. ಹೊಸಪದ ರಚನೆ ನಡೆಯುತ್ತಲೇ ಇದೆ. ಅದೇ ತೆರನಾಗಿ ಆ ಪದಗಳಿಗೆ ಸಂಬಂಧಿಸಿದಂತೆ ಹೊಸ ಪ್ರಕಾರದ ಸಂಧಿಗಳನ್ನೇಕೆ ಸೃಷ್ಟಿಸಬಾರದು? ಹೊಸಪದ ರಚನೆಗಳನ್ನು ಮಾಡುವ ನಮಗೆ ಹೊಸ ಪ್ರಕಾರದ ಸಂಧಿಗಳನ್ನು ಏಕೆ ಬಳಕೆಗೆ ತರಬಾರದು ಎಂಬುದು ನನ್ನದೊಂದು ಪುಟ್ಟ ನಿಲುವಾಗಿದೆ.

ಅದೇನೆ ಇರಲಿ ಪ್ರಸ್ತುತ ವೈನೋದಕ ಎಂಬ ಪದವು ಆಂಗ್ಲ ಮತ್ತು ಕನ್ನಡ ಎರಡೂ ಪದಗಳನ್ನು ಕೂಡಿಸಿ ವಿಶೇಷ ಸಂಸ್ಕೃತದ ಗುಣಸಂಧಿ ನಿಯಮದಡಿ ಹೆಸರಿಸಲಾಗಿದೆ. ಆದರೆ ಈ ಪದವು ಕನ್ನಡ ಸಂಧಿಯ ಸಮಸ್ಯೆಯ ವಿಶಿಷ್ಟವಾದ ಸ್ವರೂಪವಾಗಿದೆ.

ಬ್ಯಾಂಕೇತರ ಪದದ ಒಳರಚನೆಯಲ್ಲಿ ಎರಡು ಪದಗಳಿವೆ. ಅದನ್ನು ಬಿಡಿಸಿದಾಗ ಬ್ಯಾಂಕ್ + ಯೇತರ ಎಂದು ಆಗುತ್ತದೆ. ಅದರೆ ಮತ್ತೊಂದು ವಿಧಾನದಲ್ಲೂ ವರ್ಗೀಕರಣ ಮಾಡುವುದಕ್ಕೆ ಸಾಧ್ಯವಿದೆ. ಬ್ಯಾಂಕು + ಯೇತರ ಎಂದು. ಆದರೆ ಬ್ಯಾಂಕ್ + ಯೇತರ ಮತ್ತು ಬ್ಯಾಂಕು + ಯೇತರ ಎರಡು ಪದಗಳು ಗುಣಸಂಧಿಯ ನಿಯಮದಲ್ಲಿ ರಚನೆ ಮಾಡಲಾಗಿದೆ. ಆದರೆ ಅದು ಗುಣಸಂಧಿಯಲ್ಲ. ಏಕೆಂದರೆ ಗುಣಸಂಧಿ ಮಾಡುವಾಗ ಸಂಸ್ಕೃತ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಮಾಡಲಾಗುತ್ತದೆ. ಆದರೆ ಇಲ್ಲಿ ಮೊದಲನೆಯ ಪದ ಇಂಗ್ಲೀಶ್ ಆಗಿದ್ದು, ಎರಡನೆಯ ಪದ ಸಂಸ್ಕೃತ ಭಾಷೆಯದ್ದಾಗಿದೆ. ಹಾಗಾಗಿ ಇಂತಹ ಪದಗಳನ್ನು ಯಾವ ಭಾಷೆಯ (ಕನ್ನಡ ಮತ್ತು ಸಂಸ್ಕೃತ) ಸಂಧಿ ನಿಯಮದಲ್ಲಿ ವಿವರಿಸಬೇಕು ಎಂಬುದು ನಮ್ಮ ಮುಂದಿನ ಪ್ರಶ್ನೆಯಾಗಿದೆ.

ವೈನೋದ್ಯೋಗ ಎಂಬ ಮತ್ತೊಂದು ಸಮಸ್ಯೆಯ ಸ್ವರೂಪವನ್ನು ಚರ್ಚೆಗೆ ತೆಗೆದುಕೊಂಡಾಗ, ಈ ಪ್ರಕಾರದ ಪದಗಳು, ದಿನಪತ್ರಿಕೆಗಳು ಬೇರೆ ಬೇರೆ ವಿಷಯಗಳನ್ನು ತುಂಬಾ ಆಕರ್ಷಕವಾಗಿ ಮಂಡಿಸಲು ಈ ಪ್ರಕಾರದ ಪದಗಳು ಬಳಕೆಯಾಗುತ್ತವೆ. ವೈನೋದ್ಯೋಗ ಎಂಬ ಪದದ ಒಳರಚನೆಯನ್ನು ಗಮನಿಸಿದಾಗ ವೈನ್ + ಉದ್ಯೋಗ ಎಂದು ಒಡೆಯಬೇಕೆ ಅಥವಾ ವೈನು + ಉದ್ಯೋಗ ಎಂದು ಒಡೆಯಬೇಕೆ ಎನ್ನುವುದು ಒಂದು ಸಮಸ್ಯೆ. ಈ ಪದ ಗುಣಸಂಧಿ ನಿಯಮದಂತೆ ಬಳಕೆಯಾಗಿದೆ. ಆದರೆ ಗುಣಸಂಧಿಯನ್ನು ವಿವರಿಸುವಾಗ ಸಂಸ್ಕೃತ ಮತ್ತು ಸಂಸ್ಕೃತ ಪದಗಳು ಸೇರಿ ಆಗುವಂತಹವುಗಳು. ಆದರೆ ವೈನೋದ್ಯೋಗ ಎಂಬ ಪದರಚನೆಯಲ್ಲಿ ಮೊದಲನೇ ಪದ ಇಂಗ್ಲೀಶ್ ಆಗಿದ್ದು ಎರಡನೇ ಪದ ಕನ್ನಡ ಪದವಾಗಿದೆ. ಇಂತಹ ಪದಮಾದರಿಗಳನ್ನು ಸಂಸ್ಕೃತದ ಗುಣಸಂಧಿ ನಿಯಮದ ಅಡಿಯಲ್ಲಿ ವಿವರಿಸಬೇಕೆ ಅಥವಾ ಕನ್ನಡದ ಲೋಪಸಂಧಿ ನಿಯಮದಡಿಯಲ್ಲಿ ವಿವರಿಸಬೇಕೆ ಎನ್ನುವುದು ಆಧುನಿಕ ಚಿಂತನೆಯ ಭಾಗವಾಗಿದೆ. ಏಕೆಂದರೆ ಕನ್ನಡದ ಸಂದರ್ಭದಲ್ಲಿ ಇದು 'ಉ' ಕಾರ ಲೋಪಸಂಧಿ ಈ ಪ್ರಕಾರದ ಸಮಸ್ಯಾ ಸ್ವರೂಪಗಳು ಹಲವಾರು ಬಳಕೆಯಲ್ಲಿವೆ ಅವುಗಳು ಇಂತಿವೆ.

**೪. ಇಂಗ್ಲೀಶ್ + ಸಂಸ್ಕೃತ**

ಬ್ಯಾಂಕೇತರ
ಬ್ಯಾಂಕೋತ್ತರ
ಬ್ಯಾಂಕೋತ್ಪನ್ನ
ಡಾಲರೇತರ
ಚೇಕ್ಕೇತರ
ಟಿಫಿನೇತರ
ಟಿಫಿನೋತ್ತರ
ವೀಸಾರ್ಥಿ
ಪ್ಯಾರೋತ್ತರ
ಡಾಕ್ಟರೇತರ
ಸ್ಕೂಲೇತರ
ಸ್ಕೂಲೋತ್ತರ
ಹಾಸ್ಪಿಟಲೋಪಚಾರ
ಪೋಸ್ಟೇತರ

ಟೇಬಲೇತರ

ಲೆಕ್ಚರೋಪನ್ಯಾಸ

ಡ್ರೈವರೋತ್ಸಾಹ

ರೀಡರೋಪಚಾರ

ಟ್ರೈನಿಂಗೇತರ

ನ್ಯಾಚುಲರೇತರ

ಟ್ರೈನಿಂಗೇತರ

ನ್ಯಾಕೋತ್ತರ

ಬಾಲೇತರ

ಲೀವೇತರ

ಡಿಸ್ಟ್ರಿಕ್ಟೇತರ

ಬಾಟಲೇತ್ತರ

ಪೋಲಿಸೇತರ

ಎಂಜಾಯೋತ್ಸಾಹ

ಕೋರ್ಟೇತರ

ಸ್ಕೂಟರೇತರ

ಗ್ಯಾಟೇತರ

ಗ್ಯಾಟೋತ್ತರ

ಕ್ರಿಕೆಟೋತ್ಸವ

ಕ್ರಿಕೆಟೋತ್ಸಾಹ

ಮೋಟಿವೇಟೋದ್ದೀಪನ

ಇಂಟ್ರೆಸ್ಟೇತರ

ಇಂಟ್ರೇಸ್ಟೋಲ್ಲಾಸ

ಗೈಡೋದ್ಯಮಿ

ಬುಕ್ಕೋದ್ಯಮಿ

ಬ್ಯಾಂಕೋದ್ಯಮಿ

ಲಾಯರೋದ್ಯಮಿ

ಪೇಪರೋದ್ಯಮಿ

ಸ್ಪಾರೋದ್ಯಮಿ

ಆರ್ಟೋದ್ಯಮಿ

ಬಿಸೆನಸ್ಸೋತ್ಸವ

ಬಿಸನೆಸ್ಸೇತರ

ಬಿಸಿನೇಸ್ಸೋತ್ಸಾಹ

**೫. ಪರ್ಸೋ-ಅರೇಬಿಕ್ + ಸಂಸ್ಕೃತ**

ಕನ್ನಡ ಸಂಧಿಗಳಲ್ಲಿ ಮತ್ತೊಂದು ವಿಶಿಷ್ಟವಾದ ಸಮಸ್ಯೆಯ ಸ್ವರೂಪವೆಂದರೆ, ಪರ್ಸೋ-ಅರಾಬಿಕ್ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಮಾಡಿರುವ ಸಂಸ್ಕೃತದ ಸವರ್ಣದೀರ್ಘಸಂಧಿ ಹಾಗೂ ಗುಣಸಂಧಿ ನಿಯಮಗಳನ್ನು ಅನುಸರಿಸಲಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ದಿನಪತ್ರಿಕೆಗಳಲ್ಲಿ ವಿಷಯಗಳಲ್ಲಿ ವೈಭವೀಕರಿಸಿ ಪ್ರಸಾರ ಮಾಡುವ ಸಂದರ್ಭದಲ್ಲಿ ಈ ಪ್ರಕಾರದ ಮಾದರಿಗಳು ಬಳಕೆಯಾಗುತ್ತವೆ.

ಉದಾ: ಕಾನೂನೋಲ್ಲಂಘನೆ ಎಂಬ ಪದದ ರಚನೆಯಲ್ಲಿ ಸಾಮಾನ್ಯವಾಗಿ ಎರಡು ಪದಗಳು ಸೇರಿವೆ. ಅವುಗಳನ್ನು ಬಿಡಿಸಿದಾಗ ಕಾನೂನು + ಉಲ್ಲಂಘನೆ ಅಥವಾ ಕಾನೂನು+ಉಲ್ಲಂಘನೆ ಎಂಬುವುದಲ್ಲಿ ಯಾವುದು ಸರಿರೂಪ ಎಂಬುದು ಪ್ರಶ್ನಾತೀತವಾಗಿದೆ.

ಆದರೆ ಮೇಲಿನ ಎರಡೂ ಪ್ರಕಾರದ ನಿಯಮಗಳು ಗುಣಸಂಧಿಯ ನಿಯಮವನ್ನು ಅನುಸರಿಸಿವೆ. ಆದರೆ ಅದು ಗುಣಸಂಧಿಯಾಗಲಾರದು. ಏಕೆಂದರೆ ಮೇಲಿನ ಪದದಲ್ಲಿ ಕಾನೂನು ಎಂಬ ಪೂರ್ವಪದವು ಸಂಸ್ಕೃತದ್ದಾಗಿದೆ. ಆದರೆ ಬಳಕೆಯಲ್ಲಿರುವುದು ಸಂಸ್ಕೃತದ ಸಂಧಿ ನಿಯಮದಲ್ಲಿ ಕಾರಣ ಈ ಪ್ರಕಾರದ ಹೊಸ ಸ್ವರೂಪಗಳನ್ನು ಯಾವ ಸಂಧಿ ನಿಯಮದಡಿಯಲ್ಲಿ ವಿವರಿಸಬೇಕು ಎಂಬುದು ಈ ಪ್ರಕಾರದ ಸ್ವರೂಪಗಳ ಕುರಿತು ಚರ್ಚೆಯಾಗಿದೆ.

ಉದಾ: ಕಾನೂನಾಲಯ

ಕಾನೂನೋಲ್ಲಂಘನೆ

ಕಾನೂನೇತರ

**೬. ಪೋರ್ಚುಗೀಸ್ + ಕನ್ನಡ**

ಪಿಸ್ತೂಲಾಟ ಎನ್ನುವಂತಹ ಪದಗಳು ಇಂದು ದಿನಪತ್ರಿಕೆಗಳಲ್ಲಿ ವಿವಿಧ ಭಾಷೆಗಳ ಪೂರ್ವೋತ್ತರ ಪದಗಳಿಂದ ಕೂಡಿ ರಚನೆಯಾಗಿರುವ ಮಾದರಿಯಲ್ಲಿ ಇದೊಂದಾಗಿದೆ.

ಪಿಸ್ತೂಲಾಟ ಎಂಬ ಪದವನ್ನು ಒಳರಚನೆಯಲ್ಲಿ ಪಿಸ್ತೂಲು + ಆಟ ಎಂದು ಒಡೆಯಬೇಕೋ ಅಥವಾ ಪಿಸ್ತೂಲ + ಆಟ ಎಂಬುದಾಗಿ ಒಡೆಯಬೇಕೋ ಎಂಬುದು ಒಂದು ಪ್ರಶ್ನೆಯಾಗಿದೆ.

ಪಿಸ್ತೂಲ + ಆಟ ಎಂಬುದಾಗಿ ಬಿಡಿಸಿ ಕೂಡಿಸಿದರೆ ಪೂರ್ವಪದದಲ್ಲಿಯ ಅಂತ್ಯ 'ಉ'ಕಾರವು ಬಿದ್ದುಹೋಗಿ ಪಿಸ್ತೂಲಾಟ ಎಂಬ ರೂಪ ಬಳಕೆಯಾಗುತ್ತದೆ. ನಂತರ ಪಿಸ್ತೂಲ್+ಆಟ ಎಂಬುದಾಗಿ ಬಿಡಿಸಿದರೆ ಪಿಸ್ತೂಲಾಟ ಎಂಬ ಪದವು ಸವರ್ಣದೀರ್ಘ ಸಂಧಿಯ ನಿಯಮವನ್ನು ಪಾಲಿಸುತ್ತದೆ. ಆದರೆ ಇದು ಸುವರ್ಣದೀರ್ಘಸಂಧಿಯ ನಿಯಮವನ್ನು ಪಾಲಿಸುತ್ತದೆ. ಆದರೆ ಇದು ಸವರ್ಣದೀರ್ಘಸಂಧಿಯಾಗಲಾರದು. ಏಕೆಂದರೆ ಪಿಸ್ತೂಲು ಎಂಬ ಪದವು ಪೋರ್ಚ್‌ಗೀಸ್ ಭಾಷೆ ಹಾಗೂ ಆಟ ಎಂಬ ಪದವು ಕನ್ನಡ ಭಾಷೆಯದ್ದಾಗಿದೆ. ಕಾರಣ ಈ ಪ್ರಕಾರದ ಮಾದರಿಗಳನ್ನು ಯಾವ ಭಾಷೆಯ ಯಾವ ಪ್ರಕಾರದ ಸಂಧಿಗಳಲ್ಲಿ ಇಟ್ಟು ಕಲಿಯಬೇಕೆನ್ನುವುದು ನಮ್ಮ ಮುಂದಿರುವ ಪ್ರಶ್ನೆಯಾಗಿದೆ.

**೭. ಪೋರ್ಚುಗೀಸ್ + ಸಂಸ್ಕೃತ**

ಪಿಸ್ತೂಲೋಧ್ಯಮ ಎನ್ನುವಂತಹ ಪದದ ಒಳರಚನೆಯನ್ನು ಗಮನಿಸುವಾಗ ಪಿಸ್ತೂಲು + ಉಧ್ಯಮ ಎಂಬುದಾಗಿ ಬಿಡಿಸಬೇಕೊ ಅಥವಾ ಪಿಸ್ತೂಲ್ + ಉಧ್ಯಮ ಎಂಬುದಾಗಿ ಬಿಡಿಸಬೇಕೋ ಎಂಬುದು ಒಂದು ಸಮಸ್ಯೆ. ಈಗಾಗಲೇ ಸ್ವೀಕರಿಸಿರುವಂತೆ ನಾನು ಗುಣಸಂಧಿ ಎಂದು ಒಪ್ಪಿತವಾಗುವುದಿಲ್ಲ. ಏಕೆಂದರೆ ಗುಣಸಂಧಿ ನಿಯಮದ ಪ್ರಕಾರ ಸಂಸ್ಕೃತ ಮತ್ತು ಸಂಸ್ಕೃತ ಪದಗಳು ಸೇರಿ ಸಂಸ್ಕೃತ ಗುಣಸಂಧಿ ನಿಯಮ ಪಾಲಿಸಬಹುದು. ಆದರೆ ಪ್ರಸ್ತುತ ಪದದಲ್ಲಿ ಪಿಸ್ತೂಲು ಎಂಬ ಪದವು ಪೋರ್ಚುಗೀಸ್ ಭಾಷೆಯದ್ದಾಗಿದ್ದು, ಹಾಗೂ ಉಧ್ಯಮ ಎಂಬ ಪದ ಸಂಸ್ಕೃತ ಪದವಾದ್ದರಿಂದ ಸಂಸ್ಕೃತದ ಗುಣಸಂದಿ ನಿಯಮದಲ್ಲಿ ಪರಿಗಣಿಸಲು ಬರುವುದಿಲ್ಲವಾದ್ದರಿಂದ ಈ ಪ್ರಕಾರದ ಮಾದರಿಗಳನ್ನು ಯಾವ ಭಾಷೆಯ ಯಾವ ಪ್ರಕಾರದಲ್ಲಿ ಇಟ್ಟು ವಿವರಿಸಬೇಕೆಂಬುದು ನಮ್ಮ ಮುಂದಿರುವ ಸಮಸ್ಯೆಯಾಗಿದೆ.

**೮. ಪರ್ಶಿಯನ್ + ಸಂಸ್ಕೃತ**

ಕಾಫಿರೋದ್ಧಾರ : ಕರ್ಮವೀರ ವಾರಪತ್ರಿಕೆಯಲ್ಲಿ ಬಳಕೆಯಾದ ಈ ವಿಶೇಷ ದಿನದಿನ ಇರ ಕೃತಿಯಲ್ಲಿ ಸೆರೆ ಹಿಡಿಯಲಾಗಿದೆ. ಕಾಫಿರೋದ್ಧಾರ ಎಂಬ ಪದದ ಒಳರಚನೆಯನ್ನು ಗಮನಿಸಿದಾಗ ಕಾಫಿರ್ ಮತ್ತು ಉದ್ಧಾರ ಎಂಬ ಪರ್ಶಿಯನ್ ಹಾಗೂ ಸಂಸ್ಕೃತದ ಪೂರ್ವೋತ್ತರ ಪದಗಳನ್ನು ಸೇರಿಸಿ ಸಂಧಿನಿಯಮದ ಅಡಿಯಲ್ಲಿ ಸಂಸ್ಕೃತದ ಗುಣಸಂಧಿ

ನಿಯಮಕ್ಕೆ ಅನ್ವಯಿಸಿ ಬಳಕೆಯಾಗಿದೆ. ಆದರೆ ಈ ಪದವನ್ನು ಅಧ್ಯಯನವನ್ನು ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಯಾವ ಸಂಧಿನಿಯಮದಡಿಯಲ್ಲಿ ಇರಿಸಿ ಚರ್ಚಿಸಬೇಕೆನ್ನುವುದು ನಮ್ಮ ಮುಂದಿರುವ ಪ್ರಶ್ನೆಯಾಗಿದೆ.

ಈ ಪದವನ್ನು ಒಡೆಯುವಾಗ ಕಾಫಿರ್ + ಉದ್ಧಾರ ಅಥವಾ ಕಾಫಿರ + ಉದ್ಧಾರ ಎಂಬುವುಗಳಲ್ಲಿ ಯಾವುದು ಸರಿಯಾದ ಬಿಡಿಸುವ ವಿಧಾನವೆಂಬುದು ಸಹ ಚರ್ಚಾಸ್ಪದವಾಗಿದೆ.

ಆದರೆ ಈ ಎರಡೂ ಭಾಷೆಯ ಪೂರ್ವೋತ್ತರ ಪದಗಳಿಂದ ರಚನೆಯಾದ ಕಾಫಿರೋದ್ಧಾರ ಎಂಬ ಪದವನ್ನು ಸಂಸ್ಕೃತ ಗುಣಸಂಧಿ ನಿಯಮಕ್ಕೆ ಅನ್ವಯಿಸಿ ಬಳಕೆಯಾಗಿದೆ. ಈ ಪ್ರಕಾರದ ವಿಭಿನ್ನ ಭಾಷೆಗಳಿಂದ ರಚನೆಯಾದ ಪದ ಅಥವಾ ಪದಗಳನ್ನು ಯಾವ ಪ್ರಕಾರದ ಸಂಧಿ ನಿಯಮಗಳಲ್ಲಿ ವಿವರಿಸಬೇಕೆಂಬುದು ನಮಗೆದುರಾಗಿರುವ ಸಮಸ್ಯೆಯಾಗಿದೆ.

ಈ ಪ್ರಕಾರದ ಸಮಸ್ಯೆಗಳನ್ನು ಕೇವಲ ಈ ಮೊದಲು ವಿವರಿಸಿದ ಎಂಟು ಪ್ರಕಾರಗಳಲ್ಲಿ ಮಾತ್ರವಲ್ಲ. ಇನ್ನೂ ಅಸಂಖ್ಯಾತವಾದ ಭಾಷೆಗಳಲ್ಲಿ ರಚನೆಯಾಗಿರುವ ಪದಗಳನ್ನು ಗಮನಿಸಬಹುದು. ಆದರೆ ಪ್ರಸ್ತುತ ಅಧ್ಯಾಯದಲ್ಲಿ ಎಂಟು ಪ್ರಕಾರಗಳನ್ನು ಮಾತ್ರ ಸೀಮಿತಗೊಳಿಸುವುದು.

ಇಂದು ನಮ್ಮ ಶಾಲೆಯ ಪಠ್ಯಗಳಲ್ಲಿ ಸಂಧಿಕಾರ್ಯಗಳನ್ನು ಬೋಧಿಸುವಾಗ ಒಂದಕ್ಕಿಂತ ಹೆಚ್ಚು ಇರುವ ರೂಪಗಳನ್ನು ಬಳಸಿ ಬೋಧನೆ ಮಾಡಲಾಗುತ್ತಿದೆ. ಇಂತಹ ಸಂಧಿ ಪದಗಳಲ್ಲಿ ಯಾವುದು ಸಾಧುವಾದುದು ಎಂಬುದರ ಬಗೆಗೆ ಖಚಿತವಾದ ತೀರ್ಮಾನಗಳಿಲ್ಲ. ಒಂದೊಂದು ಪಠ್ಯಗಳಲ್ಲಿ ಒಂದು ರೂಪವನ್ನು ಬಳಸಲಾಗಿದೆ. ಉದಾಹರಣೆಗೆ : ಕಾಲು+ಅಂಶ= ಕಾಲಾಂಶ. ಇದು ಲೋಪಸಂಧಿ ಎಂದಿದ್ದರೆ ಇನ್ನು ಕೆಲವು ಕಡೆ ಕಾಲು+ಅಂಶ = ಕಾಲಾಂಶ ಎಂದು ದಾಖಲಿಸಲಾಗಿದೆ. ಅದೇ ರೀತಿಯಲ್ಲಿ ಕೆಂಪು+ಅಂಬುದಿ = ಕೆಂಪಂಬುದಿ = ಕೆಂಪಾಂಬು ಎಂದು ದಾಖಲಿಸಲಾಗಿದೆ.

ಈ ಪ್ರಕಾರದ ಸಂಧಿ ನಿಯಮಗಳಿಗನುಸಾರವಾಗಿ ಸಂಧಿಕಾರ್ಯ ನಡೆದರೂ ಈಗಾಗಲೇ ಪ್ರಸ್ತಾಪಿಸಲ್ಪಟ್ಟ ಸಂಧಿಗಳಿಗೆ ಉದಾಹರಣೆಯಾಗದೆ ಪ್ರತ್ಯೇಕವಾಗಿ ನಿಲ್ಲುವ ಪ್ರಯೋಗಗಳು ನಮ್ಮ ಮುಂದೆ ಬೇಕಾದಷ್ಟು ಇವೆ. ಇವು ಸಾಮ್ಯಮೂಲ ವ್ಯತ್ಯಾಸಗಳಿಂದ ಹುಟ್ಟಿಕೊಂಡಿವೆ. ಇಂಥವನ್ನು ಯಾವುದಾದರೂ ಸಂಧಿಗೆ ಉದಾಹರಣೆಯಾಗಿ ಕೊಡುವ ಪರಿಪಾಠ ನಮ್ಮಲ್ಲುಂಟು. ವಾಸ್ತವವಾಗಿ ಇಂತಹ ಅನೇಕ ಸಮಸ್ಯೆಯ ಸ್ವರೂಪಗಳು ಇಂದು ಬಳಕೆಯಲ್ಲಿವೆ. ಅವುಗಳು ಇಂತಿವೆ.

**ಲೋಪಸಂಧಿ ಹಾಗೂ ಸವರ್ಣದೀರ್ಘ ಸಂಧಿಗಳಿಗೆ**

ಉದಾಹರಣೆಗೆ:

ಒಳರ್ಥ

ಒಳಾರ್ಥ

ಒಟ್ಟರ್ಥ

ಒಟ್ಟಾರ್ಥ

**(ಸವರ್ಣದೀರ್ಘ ಸಂಧಿ, ಗುಣಸಂಧಿಗಳಿಗೆ)**

ಊಟೋಪಚಾರ

ಊಟೂಪಚಾರ

ಚಾಮುಂಡೇಶ್ವರಿ

ಚಾಮುಂಡೀಶ್ವರಿ

ಶನೀಶ್ವರ

ಶನೇಶ್ವರ

ಕೋಟೇಶ್ವರ

ಕೋಟೀಶ್ವರ

ಮಹದೀಶ್ವರ

ಮಹದೇಶ್ವರ

ರಘೂತ್ತಮ

ರಘೋತ್ತಮ

ಮುನೀಶ್ವರ

ಮುನೇಶ್ವರ

ಜಗದೂದ್ಧಾರ

ತಂಡೂಪತಂಡ

ತಂಡೋಪತಂಡ

**ಕನ್ನಡ ಸಂಧಿ : ಸಮಸ್ಯೆಗಳಿಗೆ ಕಾರಣಗಳು**

ಈ ಹಿಂದಿನ ಅಧ್ಯಾಯ ನಾಲ್ಕರಲ್ಲಿ ಗಮನಿಸಲಾದ ಕನ್ನಡ ಸಂಧಿ ಸಮಸ್ಯೆಯ ಸ್ವರೂಪಗಳಿಗೆ ಅನೇಕ ಕಾರಣಗಳಿವೆ. ಅವುಗಳನ್ನು ಇಲ್ಲಿ ದಾಖಲಿಸಲಾಗಿದೆ.

೧. ಹಳೆಗನ್ನಡದಲ್ಲಿ ವೈಯಾಕರಣಿಗಳೆಲ್ಲ ಸಂಸ್ಕೃತ ವ್ಯಾಕರಣವನ್ನೇ ಮಾದರಿಯಾಗಿರಿಸಿಕೊಂಡಿರುವುದೇ ಒಂದು ಕಾರಣವಾಗಿದೆ.

೨. ಸಂಸ್ಕೃತ ಭಾಷೆಯ ದೇವಭಾಷೆ ಹಾಗೂ ಶಾಸ್ತ್ರಾಭ್ಯಾಸಕ್ಕೆ ಮಾಧ್ಯಮವಾದ ಭಾಷೆಯಾಗಿದುದು ಒಂದು ಕಾರಣ.

೩. ಹೊಸಗನ್ನಡ ವ್ಯಾಕರಣವನ್ನು ರಚಿಸಲು ಹೊರಡುವ ಮೊದಲು ಪೊಟ್ಟು ಬಿಡದೆ ಗಟ್ಟಿಯಾಗಿ ಸಂಸ್ಕೃತ ವ್ಯಾಕರಣ, ಪರಂಪರೆಗೆ ಒಗ್ಗಿಕೊಂಡಿರುವುದು ಒಂದು ಕಾರಣವಾಗಿದೆ.

೪. ಸಂಸ್ಕೃತ ವ್ಯಾಕರಣಕ್ಕೆ ಹಲವಾರು ಶತಮಾನಗಳಷ್ಟು ದೀರ್ಘವಾದ ಚರಿತ್ರೆ ಇರುವುದು ಒಂದು ಕಾರಣ.

೫. ವೇದಗಳನ್ನು ಬದಲಾಗದಂತೆ ಉಳಿಸಿಕೊಳ್ಳುವುದಕ್ಕಾಗಿ ಅವುಗಳಲ್ಲಿ ಬಳಕೆಯಾಗುವ ವರ್ಣ, ಪದ, ಶಾಸ್ತ್ರಗಳಿಗೆ ಸಂಬಂಧಿಸಿದಂತಹ ಪದಗಳನ್ನು ವ್ಯಾಕರಣ, ಪರಿಭಾಷೆಗಳೆಲ್ಲವೂ ಸಂಸ್ಕೃತ ಭೂಮಿಷ್ಠವಾದವುಗಳಾಗಿರುವುದು.

ಈ ಪ್ರಕಾರವಾಗಿ ಮೂಲಭೂತವಾದ ಕಾರಣಗಳಿಂದ ಕನ್ನಡ ಸಂಧಿಗಳ ಪರಿಭಾಷೆ ಹಾಗೂ ವಿವರಗಳೂ ಸಹ ಸಂಸ್ಕೃತ ಭಾಷೆಯ ಅಧಿಪತ್ಯಕ್ಕೆ ಒಳಪಟ್ಟಿರುವುದು ಕನ್ನಡ ಸಂಧಿ ಸಮಸ್ಯೆಗಳಿಗೆ ಕಾರಣವಾಗಿವೆ.

ಈ ಪ್ರಕಾರದ ಎಲ್ಲಾ ಸಮಸ್ಯೆಗಳಿಂದ ವಿಮೋಚನೆಯಾಗಿ ಹೊರಬಂದಾಗ ಮಾತ್ರ ಸಮಸ್ಯಾರಹಿತವಾದ ಸಂಧಿಕಾರ್ಯಗಳನ್ನು ನಿರೀಕ್ಷಿಸಲು ಸಾಧ್ಯ. ಆಗ ಕನ್ನಡಕ್ಕೆ ಕನ್ನಡದ್ದೇ ಆದ ಸಂಧಿಕಾರ್ಯಗಳನ್ನು ಕಂಡುಕೊಂಡಂತಾಗುತ್ತದೆ.

ಸಂಸ್ಕೃತ ಭಾಷೆಯ ವ್ಯಾಕರಣದ ನಿಯಮದಡಿಯಲ್ಲಿ ಕನ್ನಡ ಭಾಷೆಯನ್ನು ಅಧ್ಯಯನ ಮಾಡ ಹೊರಟಾಗ ಅನೇಕ ಸಮಸ್ಯೆಗಳು ಎದುರಾಗುತ್ತವೆ ಎಂಬುದಕ್ಕೆ ಈ ಅಧ್ಯಯನವೇ ಸಾಕ್ಷಿಯಾಗಿದೆ. ಈ ಮೂಲಕ ಕನ್ನಡ ಭಾಷೆ ಸಂಸ್ಕೃತ ಭಾಷೆಯೊಂದರ ಜನ್ಯಭಾಷೆಯಲ್ಲ. ಕನ್ನಡ ಭಾಷೆಗೆ ಅದರದೇ ಆದ ಭಾಷಿಕ ಇತಿಹಾಸವಿದೆಯೇ ಎಂಬುದು ಕನ್ನಡ ಭಾಷೆಯ ಸ್ವರೂಪವನ್ನು ಭಾಷಿಕವಾಗಿ, ವ್ಯಾಕರಣಾತ್ಮಕವಾಗಿ, ವಿವರಣಾತ್ಮಕವಾಗಿ ಅಧ್ಯಯನದಿಂದ ತಿಳಿಯಬಹುದಾಗಿದೆ. ಕನ್ನಡ ಭಾಷೆಯ ಕಲಿಕೆಗೆ ಸಂಸ್ಕೃತ ಭಾಷೆಯಿಂದಷ್ಟೇ ಅಲ್ಲದೆ ಇನ್ನಿತರ ಭಾಷೆಗಳ ಸಾಮಿಪ್ಯದಿಂದ ಉಂಟಾದ ಸಮಸ್ಯೆಗಳನ್ನು ಸಹ ವಿವೇಚಿಸಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಕನ್ನಡ ಭಾಷಾ ರಚನೆಯ ಸ್ವರೂಪದಲ್ಲಿ ಆಗುತ್ತಿರುವ ಬದಲಾವಣೆಯನ್ನು ಬದಲಾವಣೆಯಿಂದಾಗುವ ಸಮಸ್ಯೆಯನ್ನು ಮಾದರಿ ಪದಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

(ಡಿ.ಎನ್.ಶಂಕರಭಟ್‌ರವರು ಕನ್ನಡದಲ್ಲಿ ಸೇರಿಕೆಯ ನಿಯಮಗಳನ್ನು ವಿವರಿಸುವಾಗ ಬಳಸಿರುವ ಪರಿಭಾಷೆಯ ರೂಪಗಳು ಇವುಗಳನ್ನು ಒಪ್ಪಬಹುದು. ಇಲ್ಲವೆ ಬಿಡಬಹುದು. ಆದರೆ ಆಧುನಿಕ ಚಿಂತನೆಯಲ್ಲಿ ಈ ಮಾದರಿ ಚಿಂತನಾ ಕ್ರಮವೊಂದು ನಡೆಯುತ್ತಿದೆ ಎಂಬುದು ಇಲ್ಲಿನ ಪ್ರಯತ್ನ ಅಷ್ಟೆ)

ಅಕ್ಷರ > ಅಕ್ಕರ (ತದ್ಭವ)

ಧ್ವನಿ > ದನಿ

ಹೃಸ್ವ > ಗಿಡ್ಡ

ದೀರ್ಘ > ಉದ್ದ

ಅನುಸ್ವಾರ > ಸೊನ್ನೆ/ಮೂಗುಲಿಯ

ಆಕೃತಿಮಾ > ಪದ

ಸಂಧಿ > ಸೇರಿಕೆ

ಸಂಧಿಕಾರ್ಯ > ಸೇರಿಕೆಯ ನಿಯಮ/ಸೇರಿಕೆಯ ಬದಲಾವಣೆ

ಲೋಪ > ಬಿದ್ದು

ಲೋಪವಾಗು > ಬಿದ್ದುಹೋಗು

ಆಗಮ > ಬರು/ಸೇರು

ಪದಮಧ್ಯ > ಪದ ಒಳರಚನೆ

ನಿಯಮ > ಒಲವು

ವಿಗ್ರಹವಾಕ್ಯ > ಒಳನುಡಿ

ಹೆಸರಿಸು > ಗುರುತಿಸು

ಸಂಖ್ಯಾವಾಚಕ > ಸರ್ವಪದ

ಅಧಿಕರಣ > ಜಾಗ

ಶಿಷ್ಟಭಾಷೆ > ಸಮಾನ ಪ್ರಭೇದ

ಲಿಪಿ > ಪದ ಸ್ವರೂಪ

ಅಕ್ಷರಕ್ರಾಂತಿ > ಲಿಪಿಕ್ರಾಂತಿ

ಈ ಪ್ರಕಾರದ ಸೇರಿಕೆಯ ನಿಯಮಗಳನ್ನು ವಿವರಿಸುವಾಗ ಡಿ.ಎನ್.ಶಂಕರಭಟ್‌ರವರು ಪ್ರಯೋಗಿಸಿರುವ ಹೊಸ ಪರಿಭಾಷೆಗಳನ್ನು ಮನಗಂಡಾಗ, ಕೇವಲ ಸೇರಿಕೆಯ ನಿಯಮಗಳಲ್ಲಿ ಬಳಕೆಯಾಗುವ ಪದಗಳಿಗೆ ಹೊಸ ಪರಿಭಾಷೆಗಳನ್ನು ಕಂಡುಕೊಳ್ಳದೇ, ಇಡೀ ವ್ಯಾಕರಣ

ಸ್ವರೂಪಕ್ಕೆ ಹಾಗೂ ವ್ಯಾಕರಣ ಭಾಗದಲ್ಲಿ ಕಂಡುಬರುವ ಪ್ರತೀ ಅಂಶಗಳಿಗೂ ಪರಿಭಾಷೆಗಳನ್ನು ರಚಿಸುವಂತಹ ಸಾಮರ್ಥ್ಯ ರೂಢಿಸಿಕೊಂಡಾಗ ಮಾತ್ರ ಇಡೀ ವ್ಯಾಕರಣವನ್ನು ಪ್ರಸ್ತುತ ಸಂದರ್ಭಕ್ಕೆ ತಕ್ಕಂತೆ ಸಮಸ್ಯಾರಚಿತವಾದ ವ್ಯಾಕರಣವನ್ನು ರಚಿಸಲು ಸಾಧ್ಯವಾಗುತ್ತದೆ ಎಂಬುವ ಅಂಶ ಈ ಹಿಂದಿನ ಸೇರಿಕೆಯ ಪರಿಭಾಷೆ ಪಟ್ಟಿಗಳಿಂದ ತಿಳಿದುಬರುತ್ತದೆ.

## ಉಪಸಂಹಾರ

ನಮ್ಮ ಶಾಲೆಯ ಪಠ್ಯಗಳಲ್ಲಿ ಬೋಧನೆ ಮಾಡುತ್ತಿರುವ ಸಂಧಿಕಾರ್ಯ ಸಮರ್ಪಕವಾಗಿಲ್ಲ. ಅಂದರೆ ಕೇವಲ ಕಂಠಪಾಠ ಮಾಡಿ ಒಪ್ಪಿಸುವ ಕೆಲಸ ಜರುಗಿದೆ. ನಮ್ಮ ನೆನಪಿನ ಅಂಗಳದಲ್ಲಿ ಉಳಿಯುತ್ತಿಲ್ಲ. ಇದಕ್ಕೆ ಕಾರಣಗಳೇನು? ಬಹುಶಃ ನಾವು ಮಾತನಾಡುವ ಕನ್ನಡ ಮತ್ತು ಶಾಲೆಗಳಲ್ಲಿ ಕಲಿಯುವ ಕನ್ನಡದ ನಡುವೆ ಅಂತರ ಜಾಸ್ತಿಯಿದೆ. ಈ ಹಿನ್ನೆಲೆಯಲ್ಲಿ ನಮ್ಮ ಮಕ್ಕಳಿಗೆ ಕನ್ನಡದ ಕಲಿಕೆ ಕಷ್ಟವಾಗುತ್ತದೆ. ಸಂಧಿಕಾರ್ಯಗಳ ಬೋಧನೆ ಕೇವಲ ಪರೀಕ್ಷೆಯ ವಿಷಯವಾಗಿ ಮಾತ್ರ ಉಳಿದಿದೆ. ಅದು ನಮ್ಮ ಜೀವನ ನಿರ್ವಹಣೆಯ ಭಾಗವಾಗಿ ಅಥವಾ ಶೈಕ್ಷಣಿಕ ಚಟುವಟಿಕೆಗಳನ್ನು ವಿಸ್ತರಿಸುವ ಭಾಗವಾಗಿರಬೇಕಾಗುತ್ತದೆ. ಅಂದರೆ ಸಂಧಿಕಾರ್ಯಗಳು ಕ್ರಿಯಾತ್ಮಕ ಕಲಿಕೆಯ ಭಾಗವಾಗಬೇಕಾಗುತ್ತದೆ.

ಇಂತಹ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಡಿ.ಎನ್.ಶಂಕರಭಟ್‌ರವರು ಇತ್ತೀಚಿನ ದಿನಗಳಲ್ಲಿ ತಮ್ಮ ಬರಹಗಳಲ್ಲಿ ಅಭಿಪ್ರಾಯಪಡುತ್ತಾರೆ. ಅಂದರೆ ಕನ್ನಡ ಭಾಷೆಯಲ್ಲಿ ಸಂಸ್ಕೃತ ಪದಗಳಿಗೆ ಮಾನ್ಯತೆ ನೀಡುವ ಹಾಗೆ ಹಿಂದಿ, ಇಂಗ್ಲೀಶ್, ಪರ್ಶೋ-ಅರಾಬಿಕ್ ಮೊದಲಾದ ಭಾಷೆಗಳಿಂದ ಬಂದಿರುವ ಪದಗಳಿಗೆ ಮಾನ್ಯತೆ ನೀಡುತ್ತಿಲ್ಲ, ತಾರತಮ್ಯ ಅನುಸರಿಸಲಾಗುತ್ತಿದೆ.

ಸಂಸ್ಕೃತ ಸಂಧಿಗಳನ್ನು ಬರಹದಲ್ಲಿರುವಂತೆ ಉಚ್ಚರಣೆ ಮಾಡಿದರೆ ಮಾತ್ರ ಶುದ್ಧವಾದ ಕನ್ನಡದ ಉಚ್ಚಾರವೆಂದು ಬಿಂಬಿಸಲಾಗುತ್ತಿದೆ.

ಕನ್ನಡದಲ್ಲಿ ಇತರೆ ಭಾಷೆಗಳಿಂದ ಬಂದಿರುವ ಸಂಧಿ ಪದಗಳನ್ನು ಅಶುದ್ಧವಾದ ರಚನೆ ಎಂದು ಬಿಂಬಿಸಲಾಗುತ್ತಿದೆ. ಈ ತಿಳುವಳಿಕೆ ಸಾಮಾಜಿಕರಲ್ಲಿ ಬರುವಂತೆ ಮಾಡಬೇಕಾಗಿದೆ. ಶಾಲೆಯ ಆವರಣದಲ್ಲಿ ಮಕ್ಕಳು ಸಂಧಿಪದಗಳನ್ನು ಬಿಡಿಸಿ ಬೋಧನೆ ಮಾಡುವುದು ಇಂದು ಅನಗತ್ಯವಾದ ಹೊರೆಯಾಗಿದೆ. ಏಕೆಂದರೆ ಒಂದು ಭಾಷೆಯನ್ನು ಕಟ್ಟುವುದು ಸರಿಯಾದ ಕ್ರಮ. ಅಂದರೆ ಇದರ ಅರ್ಥ ಮಕ್ಕಳಿಗೆ ಪದಗಳನ್ನು ಕೂಡಿಸುವ ಕೌಶಲ್ಯವನ್ನು ಬೋಧನೆ ಮಾಡಬೇಕೇ ವಿನಹ ಪದಗಳನ್ನು ವಿಭಜನೆ ಮಾಡುವುದನ್ನು ಬೋಧನೆ ಮಾಡುವುದು ಸರಿಯಾದ ಕ್ರಮವಲ್ಲ.

ಕನ್ನಡ ಸಂಧಿಗಳನ್ನು ಮಕ್ಕಳಿಗೆ ಬೋಧನೆ ಮಾಡುವಾಗ ಶ್ಚುತ್ವಸಂಧಿ, ಛತ್ವಸಂಧಿ, ವೃದ್ಧಿಸಂಧಿ ಎಂಬ ಪರಿಭಾಷೆಗಳನ್ನು ಬಳಕೆಮಾಡುವುದು ಅನಗತ್ಯವಾದ ಹೊರೆಯಾಗಿದೆ. ಅದಕ್ಕೆ ಬದಲು ಸಂಧಿ ಪದಗಳಲ್ಲಿ ನಡೆದಿರುವ ಧ್ವನಿಬದಲಾವಣೆಗಳನ್ನು ಪರಿಚಯಿಸುವುದು ಸೂಕ್ತವಾದ ಕ್ರಮ.

ಶಾಲೆಯ ಆವರಣದಲ್ಲಿ ಮಕ್ಕಳಿಗೆ ಸಂಧಿಗಳನ್ನು ಪರಿಚಯಿಸುವುದಕ್ಕೆ ೪೯ ಅಕ್ಷರಗಳನ್ನು ಬಳಸಲಾಗುತ್ತಿದೆ. ಇದಕ್ಕೆ ಬದಲು ಕೇವಲ ೩೩ ಅಕ್ಷರಗಳನ್ನು ಬಳಸಿಕೊಂಡು ಸಮಗ್ರ ಕನ್ನಡ ಸಂಧಿಗಳನ್ನು ವಿವರಿಸಬಹುದಾಗಿದೆ.

ಕನ್ನಡ ಸಂಧಿಗಳನ್ನು ಬೋಧನೆ ಮಾಡುವಾಗ ಸಂಸ್ಕೃತದ ಸಂಧಿಗಳು ಮತ್ತು ಕನ್ನಡ ಸಂಧಿಗಳೆಂದು ವರ್ಗೀಕರಿಸಿ ಬೋಧನೆ ಮಾಡಲಾಗುತ್ತದೆ. ಇದರ ಹಿಂದಿರುವ ಉದ್ದೇಶ ಕನ್ನಡ ಮತ್ತು ಸಂಸ್ಕೃತ ಭಾಷೆಗಳು ಬೇರೆ ಬೇರೆ ಭಾಷಾ ಪರಿವಾರಕ್ಕೆ ಸೇರಿರುವವು. ಇದರಿಂದ ಈ ಎರಡೂ ಭಾಷೆಗಳ ಭಾಷಿಕ ನಿಯಮಗಳು ಬೇರೆ ಬೇರೆಯಾಗಿವೆ. ಉದಾಹರಣೆಗೆ; ವೈನೋದಕ ಈ ಪದವನ್ನು ಎರಡು ರೀತಿಯಲ್ಲಿ ವಿಭಜಿಸಲು ಸಾಧ್ಯ ಒಂದು ವೈನ್+ಉದಕ ಎಂದು ವೈನು+ಉದಕ, ಮೊದಲನೆಯ ರಚನೆ ಇಂಗ್ಲೀಶ್‌ನ ಉಚ್ಚಾರಣೆಯಂತೆ ವ್ಯಂಜನಾಂತ್ಯವಾಗಿ ಬಳಸಲಾಗಿದೆ. ಎರಡನೆಯ ಮಾದರಿಯನ್ನು ಇಂಗ್ಲೀಶ್ ಪದವನ್ನು ಸ್ವರಾಂತ್ಯಗೊಳಿಸಿ ವಿಭಜಿಸಲಾಗಿದೆ. ವೈನು + ಉದಕ = ವೈನೋದಕ ಎನ್ನುವಾಗ ಕನ್ನಡದ ಸಂಧಿ ಸಂದರ್ಭದಲ್ಲಿ 'ಉ' ಲೋಪವಾಗಿ ಲೋಪಸಂಧಿಯಾಗಿದೆ. ಸಂಸ್ಕೃತ ಸಂಧಿ ನಿಯಮದ ಪ್ರಕಾರ ಗುಣಸಂಧಿ ನಿಯಮವಿದೆ. ಆದರೆ ಗುಣಸಂಧಿ ಮಾಡುವಾಗ ಸಂಸ್ಕೃತ ಮತ್ತು ಸಂಸ್ಕೃತ ಪದಗಳು ಸೇರಿಸಿ ಮಾಡಲಾಗುತ್ತಿದೆ. ಇಂತಹ ಮಾದರಿಗಳು ಹಲವಾರು ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿವೆ. ಹೀಗೆ ಬಳಕೆಯಲ್ಲಿರುವ ಮಾದರಿಗಳನ್ನು ಸಂಸ್ಕೃತ ಸಂಧಿ ನಿಯಮದಲ್ಲಿ ವಿವರಿಸಬೇಕೆ ಅಥವಾ ಕನ್ನಡ ಸಂಧಿ ನಿಯಮದಲ್ಲಿ ವಿವರಿಸಬೇಕೆ ಎಂಬುದು ನನ್ನ ಮುಂದಿರುವ ಪ್ರಶ್ನೆ ಇಂತಹ ಸಮಸ್ಯೆಗೆ ಪರಿಹಾರವನ್ನು ಕನ್ನಡಪರ ರಾಷ್ಟ್ರಚಿಂತಕರೂ, ಶಿಕ್ಷಣತಜ್ಞ, ಮನೋವಿಜ್ಞಾನಿಗಳು ಒಂದು ಕಡೆ ಕುಳಿತು ಚರ್ಚೆ ಮಾಡಿ ನಿರ್ಧಾರಕ್ಕೆ ಬರಬೇಕಾಗಿದೆ. ಒಟ್ಟಾರೆಯಾಗಿ ಕನ್ನಡದಲ್ಲಿ ಬಳಕೆಯಲ್ಲಿರುವ ಸ್ವರ ಮತ್ತು ವ್ಯಂಜನದಿಂದ ಕೂಡಿರುವ ಸಂಸ್ಕೃತ ಸಂಧಿಕಾರ್ಯಗಳನ್ನೆಲ್ಲಾ ಕನ್ನಡದ ಲೋಪ, ಆಗಮ ಮತ್ತು ಆದೇಶ ಎಂಬ ಸಂಧಿಗಳಲ್ಲಿ ವಿವರಿಸಬಹುದಾಗಿದೆ.

ಹೀಗೆ ವಿವರಿಸುವುದರಿಂದ ಮಕ್ಕಳಿಗೆ ಹೊರೆಯಾಗಿರುವ ಹಲವಾರು ಬಗೆಯ ಸಂಧಿಕಾರ್ಯಗಳನ್ನು ಕಡಿಮೆಮಾಡಿ ಅವುಗಳ ಮೂಲ ಆಶಯಕ್ಕೆ ದಕ್ಕೆ ಬಾರದ ಹಾಗೆ ಅರ್ಥಕ್ಕೆ ಭಂಗ ಬಾರದ ರೀತಿಯಲ್ಲಿ ಅಳವಡಿಸಬಹುದಾಗಿದೆ.

**ಆಕರ ಗ್ರಂಥಗಳು:**


೧. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ; ಡಾ. ಡಿ.ಎನ್. ಶಂಕರಭಟ್; ಭಾಷಾ ಪ್ರಕಾಶನ, ಮೈಸೂರು, ೨೦೦೦.

೨. ಕನ್ನಡ ನುಡಿಯ ಬಗೆಗೆ ಚಿಂತನೆ; ಡಾ. ಡಿ.ಎನ್. ಶಂಕರಭಟ್; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು; ೨೦೦೬.

೩. ಕನ್ನಡ ನುಡಿ ನಡೆದು ಬಂದ ದಾರಿ; ಡಾ. ಡಿ.ಎನ್. ಶಂಕರಭಟ್; ಭಾಷಾ ಪ್ರಕಾಶನ; ಹೆಗ್ಗೋಡು; ೨೦೦೭

೪. ಕನ್ನಡಕ್ಕೆ ಕನ್ನಡದ್ದೇ ಪದಗಳು; ಡಾ. ಡಿ.ಎನ್. ಶಂಕರಭಟ್; ಭಾಷಾ ಪ್ರಕಾಶನ, ಮೈಸೂರು, ೨೦೦೭

೫. ಕನ್ನಡ ನುಡಿಗೆ ಸಂಸ್ಕೃತ ಮೂಲವಲ್ಲ; ಡಾ. ಡಿ.ಎನ್. ಶಂಕರಭಟ್; ಭಾಷಾ ಪ್ರಕಾಶನ, ಮೈಸೂರು, ೨೦೦೮.

೬. ಕನ್ನಡ ಜಗತ್ತು : ಅರ್ಧ ಶತಮಾನ; ಡಾ. ಕೆ.ವಿ. ನಾರಾಯಣ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೭. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ೧ – ಭಾಷೆ; ಸಂಪಾದಕರು; ಡಾ. ಕೆ.ವಿ.ನಾರಾಯಣ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೮. ಕನ್ನಡ ಶೈಲಿ ಕೈಪಿಡಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಭಾರತೀಯ ಭಾಷೆಗಳ ಕೇಂದ್ರ, ಸಂಸ್ಥೆ, ಮೈಸೂರು, ೧೯೯೫.

೯. ಕನ್ನಡ ಮಧ್ಯಮ ವ್ಯಾಕರಣ; ತೀ.ನಂ.ಶ್ರೀಕಂಠಯ್ಯ; ಗೀತಾ ಬುಕ್ ಹೌಸ್; ಮೈಸೂರು, ೨೦೦೮.

೧೦. ಕನ್ನಡ ವ್ಯಾಕರಣ ಸಮಸ್ಯೆಗಳು; ಡಾ. ವಿಲ್ಯಂ ಮಾಡ್ತ; ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೮.

೧೧. **ಕನ್ನಡ ಸಂಕ್ಷಿಪ್ತ ವ್ಯಾಕರಣ**; ಡಾ. ಕೆ. ಕುಶಾಲಪ್ಪಗೌಡ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸುವರ್ಣ ಕರ್ನಾಟಕ, ೨೦೦೭, ೨೦೦೬

೧೨. **ಕನ್ನಡ ವ್ಯಾಕರಣ ದರ್ಪಣ**; ಡಾ. ಎಂ.ಬಿ.ನಾಗರಾಜ್ ರಾವ್; ವಸಂತ ಪ್ರಕಾಶನ ಬೆಂಗಳೂರು, ೨೦೦೭

೧೩. **ಕನ್ನಡ ವ್ಯಾಕರಣ**; ಬಿ. ಬಸವರಾಜ; ಪ್ರಕಾಶಕರು ಶ್ರೀಯುತ ಬಿ.ಆರ್.ಈಶ್ವರಪ್ಪ, ವರ್ತಕರು, ಹರಪನಹಳ್ಳಿ, ೨೦೦೬.

೧೪. **ಕನ್ನಡ ವ್ಯಾಕರಣ, ಛಂದಸ್ಸು ಮತ್ತು ಅಲಂಕಾರ**; ಡಾ. ಬಿ.ಬಿ.ರಾಜಪುರೋಹಿತ; ಫೆರ್ನಾಂಡೀಸ್ ಪ್ರಕಾಶನ, ೧೯೯೨.

೧೫. **ಕನ್ನಡ ವ್ಯಾಕರಣ ಮತ್ತು ಭಾಷೆ**; ಡಾ. ವ್ಹಿ.ಜಿ.ಪೂಜಾರ; ಚೇತನ ಪ್ರಕಾಶನ, ಗುಲಬರ್ಗಾ, ೨೦೦೮

೧೬. **ಕನ್ನಡ ಭಾಷಾಲೋಚನ**; ಡಾ.ಸಿ.ರಾಮಚಂದ್ರ; ಭಾಷಾ ಪ್ರಕಾಶನ, ಮೈಸೂರು, ೨೦೦೬.

೧೭. **ಕನ್ನಡ : ರಚನೆ ಮತ್ತು ಬಳಕೆ (ಲೇ)**; ಡಾ. ಕೃಷ್ಣ ಪರಮೇಶ್ವರಭಟ್ಟ, ಡಾ. ಸಿ.ನಾಗಭೂಷಣ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೨೦೦೨.

೧೮. **ಕನ್ನಡ ನುಡಿಗನ್ನಡ (ಹೊಸಗನ್ನಡ ವ್ಯಾಕರಣ)**; ಪಂಡಿತ ಮ. ಪ್ರ. ಪೂಜಾರ; ಸಮಾಜ ಪುಸ್ತಕಾಲಯ, ಧಾರವಾಡ, ೧೯೮೯.

೧೯. **ಆಧುನಿಕ ಕನ್ನಡ ವ್ಯಾಕರಣ ಕೈಪಿಡಿ**; ಲೇಖಕರು, ಷಣ್ಮುಖ ಹೆಗಡೆ; ಪಝಾ ಪುಸ್ತಕ ಭಂಡಾರ; ಬೆಂಗಳೂರು, ೨೦೦೬.

೨೦. **ನವಕರ್ನಾಟಕ ಸಚಿತ್ರ ಸರಳ ವ್ಯಾಕರಣ**; ಪ್ರೊ. ಬಿ.ಎಸ್.ರುಕ್ಕಮ್ಮ; ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೪.

೨೧. **ನವಕರ್ನಾಟಕ ವ್ಯಾಕರಣ ಕೈಗನ್ನಡಿ**; ಕೆ. ದಾಮೋದರ ಐತಾಳ; ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೩.

೨೨. **ಸಂಧಿ – ಸಮಾಸಗಳು**; ಲೇಖಕರು ಶ್ರೀ. ಕೃ. ಕುಲಕರ್ಣಿ; ಶ್ರೀ ವೈಭವ ಲಕ್ಷ್ಮೀ ಪ್ರಕಾಶನ, ಹುಬ್ಬಳ್ಳಿ, ೧೯೯೫.

೨೩. **ಸಮಗ್ರ ಹೊಸಗನ್ನಡ ವ್ಯಾಕರಣ**; ಆಯ್. ಎಸ್. ಅರಳಗುಪ್ಪಿ; ಸಮಾಜ ಪುಸ್ತಕಾಲಯ, ಧಾರವಾಡ, ೧೯೯೬.

೨೪. **ಸಿರಿಗನ್ನಡ ಗನ್ನಡಿ**; ಎನ್.ಬಿ.ವೀರನಗೌಡ; ಜಯಂತು ಪ್ರಕಾಶನ, ಶಿವಮೊಗ್ಗ, ೨೦೦೭.

೨೫. **ಹೊಸಗನ್ನಡ ವ್ಯಾಕರಣ ದರ್ಪಣ**; ಡಾ.ಎಚ್.ಎನ್. ಮಂಜುರಾಜ್, ಚಂದ್ರ.ವಿ. ಉಂಡವಾಡಿ; ಚಿಂತನ–ಮಂಥನ ಪ್ರಕಾಶನ, ಕೃಷ್ಣರಾಜನಗರ, ಮೈಸೂರು, ೨೦೦೨.

೨೬. **ಹೊಸಗನ್ನಡದ ವ್ಯಾಕರಣ**; ಡಾ. ಟಿ.ವಿ.ವೆಂಕಾಟಚಲಶಾಸ್ತ್ರೀ; ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೨೦೦೭.

೨೭. **ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ**; ಸಂಪಾದಕರು ಡಾ. ಟಿ.ವಿ.ವೆಂಕಟಾಚಲಶಾಸ್ತ್ರಿ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ೧೯೨೦.

೨೮. **ಕೇಶಿರಾಜನ ಶಬ್ದಮಣಿದರ್ಪಣ ವಿಲಾಸ**; ಡಾ. ವಿ. ಶಿವಾನಂದ ವಿಜಯ ಪುಸ್ತಕ ಭಂಡಾರ ಮತ್ತು ಪ್ರಕಾಶನ ಗದಗ, ೧೯೭೨.

೨೯. **ಕೇಶಿರಾಜ ವಿರಚಿತ 'ಶಬ್ದಮಣಿ ದರ್ಪಣಂ'**; ಸಂಪಾದಕರು ಡಾ. ಡಿ.ಎಲ್.ನರಸಿಂಹಾಚಾರ್, ಡಾ.ವಿ.ಕೆ.ಮೂರ್ತಿ, ಪ್ರಕಾಶಕರು, ಕೃಷ್ಣಮೂರ್ತಿ ಪುರಂ, ಮೈಸೂರು, ೧೯೫೮.

೩೦. **ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ (ಸಂ)**; ಡಾ. ಎಲ್. ಬಸವರಾಜು; ಶ್ರೀ ಚಿನ್ಮೂಲಾದ್ರಿ ಬ್ರಹ್ಮನಠ ಸಂಸ್ಥಾನ, ಚಿತ್ರದುರ್ಗ, ೧೯೮೬.

೩೧. **ಮಕ್ಕಳ ಭಾಷಾವಿಜ್ಞಾನ ಮತ್ತು ಇತರ ಲೇಖನಗಳು (ಕನ್ನಡಕ್ಕೆ ಬೇಕಾದ ಸಹಜ ಮತ್ತು ಸರಳ ಸಮಗ್ರ ವ್ಯಾಕರಣ)** – ಸಂಪಾದನೆ ಬಸವರಾಜ ಕೋಡಗುಂಟಿ

೩೨. ದಿನದಿನ ೧; ಸಂಕಲನ ಡಾ. ಕೆ.ವಿ.ನಾರಾಯಣ; ಡಾ. ಬಿ.ಸುಜ್ಞಾನಮೂರ್ತಿ, ಡಾ.ಅಶೋಕಕುಮಾರ ರಂಜೇರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೩೩. ದಿನದಿನ ೨; ಸಂಕಲನ ಡಾ. ಸಾಂಬಮೂರ್ತಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩೪. ದಿನದಿನ ೩; ಸಂಕಲನ ಡಾ. ಮಹಾದೇವಯ್ಯ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೩೫. **ಕನ್ನಡ ಭಾಷಾ ಪಠ್ಯ ಪುಸ್ತಕಗಳು** (ಕನ್ನಡ ಸಂಧಿಗಳ ವಿವರ ಮತ್ತು ಉದಾಹರಣೆಗಳನ್ನು ಅನುಲಕ್ಷಿಸಿ)

